# ‘ವಿಮೋಚನೆ ಫಲದ ವೃಕ್ಷವನ್ನು ನನ್ನ ರಕ್ತ ಬೆಳಸಲಿ’

‘ವಿಮೋಚನೆಯ ಫಲ ನೀಡುವ ವೃಕ್ಷವನ್ನು ನನ್ನ ರಕ್ತ ಬೆಳಸಲಿ’. ಇದು ದಕ್ಷಿಣ ಆಫ್ರಿಕಾದ ರಾಷ್ಟ್ರೀಯವಾದಿ 23ರ ಹರೆಯದ ಬಿಸಿರಕ್ತದಂಕಪ್ಪು ಗೆರಿಲ್ಲಾ ನಾಯಕ ಸೋಲೊಮನ್ ಕಲೂಶಿ ಮಹಾಲಂಗು ವರ್ಣೀಯ ಕ್ರೂರ ಸರ್ಕಾರ ತನ್ನನ್ನು ನೇಣುಹಾಕುವ ಹಿಂದಿನ ದಿನ ತನ್ನ ವೃದ್ಧ ತಾಯಿ ಮಾರ್ಥಾ ಮಹಾಲಂಗುವಿನ ಜತೆಯ ಕೊನೆ ಬೇಟಿ ಸಮಯದಲ್ಲಿ ಆಡಿದಮಾತು.

ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ಸಿನ ಮಿಲಿಟರಿ ವಿಭಾಗದ ಕಾರ್ಯಕರ್ತ ಆಗಿದ್ದ ಮಹಾಲಂಗು "ನಾನು ನನ್ನ ಜನರನ್ನು ಪ್ರೀತಿಸುತ್ತೇನೆ. ಅವರು ಈ ಹೋರಾಟವನ್ನು ಮುಂದುವರಿಸುವಂತೆ ಜನತೆಗೆ ತಿಳಿಸು" ಎಂದು ದುಃಖ ತಪ್ತ ತಾಯಿಗೆ ಹೇಳಿದ.

ಸೋಲೊಮನ್ ಮಹಾಲಂಗು ಅಕ್ಟೋಬರ್ 10. 1956ರಲ್ಲಿ ಪ್ರಿಟೋರಿಯಾದ ಮಮೆಲೋಡಿ ಎಂಬಲ್ಲಿ ಹುಟ್ಟಿದ. ಮಮೆಲೋಡಿಯಲ್ಲೇ ಶಿಕ್ಷಣ ಆರಂಭ. ತನ್ನ ಮೊದಲ ವರ್ಷದ ಮೆಟ್ರಿಕ್ಯುಲೇಷನ್ ವ್ಯಾಸಂಗದ ಸಮಯದಲ್ಲಿ 1976ರ ಜೂನ್ ತಿಂಗಳಲ್ಲಿ ವಿದ್ಯಾರ್ಥಿ ಬಂಡಾಯವೆದ್ದಿತು. ಟ್ರಾನ್ಸ್‌ವಾಲದಲ್ಲಿನ ಆಫ್ರಿಕಾದ ಶಾಲೆಗಳಲ್ಲಿ ಆಫ್ರಿಕಾನ್ಸ್ ಭಾಷೆಯ ಕಡ್ಡಾಯ ಶಿಕ್ಷಣದ ವಿರುದ್ಧ ಈ ಬಂಡಾಯ ಭುಗಿಲೆದ್ದಿತು. ಈ ವಿದ್ಯಾರ್ಥಿ ಬಂಡಾಯ ಮೂಲಭೂತವಾಗಿ ಇಡೀ ಬಂಟೂ ಶಿಕ್ಷಣ ಪದ್ಧತಿ ವಿರುದ್ಧವೇ ಆಗಿತ್ತಲ್ಲದೆ ಆಫ್ರಿಕಾದಲ್ಲಿನ ವರ್ಣದ್ವೇಷದ ಗುಲಾಮತನದ ವಿರುದ್ಧ ರೂಪಾಂತರ ಗೊಂಡಿತು. ವಿದ್ಯಾರ್ಥಿಗಳು, ಯುವಕರು ಮತ್ತು ಕಾರ್ಮಿಕರು ಒಂದುಗೂಡಿ ವರ್ಣವ್ಯವಸ್ಥೆ ವಿರುದ್ಧ ಪ್ರತಪ್ರದರ್ಶನ ನಡೆಸಿದರು. ಪ್ರತಿಭಟನೆಯ ಚಳವಳಿ ತೀವ್ರಗೊಂಡಂತೆ ಮಹಾಲಂಗು ಹೆಚ್ಚು ಹೆಚ್ಚು ಸಕ್ರಿಯ ನಾಯಕತ್ವವಹಿಸಿದ.



ಕರಿಯರ ಈ ಬಂಡಾಯದಲ್ಲಿ ಪೋಲೀಸರು ಗೋಲೀಬಾರ್ ನಡೆಸಿ ಅನೇಕರನ್ನು ಕೊಂದರು. ಸಹಸ್ರಾರು ಮಂದಿ ಗಾಯಗೊಂಡರು.

ವಿದ್ಯಾರ್ಥಿಗಳು ಪೋಲೀಸ್ ಶಕ್ತಿಯ ವಿರುದ್ಧ ತಮ್ಮ ಶಕ್ತಿಮೀರಿ ಕಲ್ಲು, ದೊಣ್ಣೆ ಮುಂತಾದ ಅಸ್ತ್ರಗಳನ್ನು ಎಷ್ಟೇ ಬಳಸಿದರೂ ತಲ್ಲಣಗೊಂಡರು.

ಶಸ್ತ್ರಾಸ್ತ್ರಗಳಿಲ್ಲದೆ, ತರಬೇತಿಲ್ಲದೆ ವಿದ್ಯಾರ್ಥಿಗಳಿಗೆ ಜಯ ಎಂದೂಲಭಿಸಲಾರದೆಂದು ಕೂಡಲೆ ಮಹಾಲಂಗು ಮನಗಂಡ. ತನ್ನ ಗೆಳೆಯರೊಡಗೂಡಿ ರಾಷ್ಟ್ರೀಯ ವಿಮೋಚನಾ ಚಳವಳಿಗಾಗಿ ಎ. ಎನ್. ಸಿಗೆ ಸೇರಲು ನಿರ್ಧರಿಸಿದ. ತನ್ನ ನಿರ್ಧಾರದಂತೆ ದಕ್ಷಿಣ ಆಫ್ರಿಕಾಬಿಟ್ಟು 1976ರ ಅಕ್ಟೋಬರ್‌ನಲ್ಲಿ ಮಹಾಲಂಗು ಎ. ಎನ್. ಸಿಗೆ

[ಕೊನೆಯ ಪುಟ ನೋಡಿ]

# ಪಂಚಮ

ಸಂಪುಟ : 3 ಸಂಚಿಕೆ : 8 5, ಮೇ 1979 ಪಾಕ್ಷಿಕ ಬೆಲೆ : 20 ಪೈಸೆ.



# ಹಾಸನ ಬಳಿ ದಲಿತ ಯುವತಿ ಕೊಲೆ

(ಪಂಚಮ ಪ್ರತಿನಿಧಿಯಿಂದ)

ಹಾಸನ ಜಿಲ್ಲೆ ಕಟ್ಟಾಯ ಹೋಬಳಿ ನಾಯಕನ ಹಳ್ಳಿಯ ಹರಿಜನ ಯುವತಿ ಬೋರಮ್ಮ(18) ಎಂಬಾಕೆಯನ್ನು ಸವರ್ಣೀಯ ಜಮೀನ್ದಾರರು ಮಾ. 20ರ ರಾತ್ರಿ ಕೊಲೆ ಮಾಡಿರುವುದಾಗಿ ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಹಾಸನ ಶಾಖೆ ತಿಳಿಸಿದೆ.

.ಮಾ 20ರಂದು ಬೋರಮ್ಮ ಅವರನ್ನು ತನ್ನ ಹೊಲದಲ್ಲಿ ಸೌದೆ ಸಂಗ್ರಹಿಸಿದ ಆಪಾದನೆ ಮೇಲೆ ಸ್ಥಳೀಯ ಜಮೀನ್ದಾರ ಚೆನ್ನೇಗೌಡ ಆಕೆಯನ್ನು ಥಳಿಸಿದನೆಂದು ಗೊತ್ತಾಗಿದೆ.

ಯಾವ ಅಪರಾಧವನ್ನೂ ಮಾಡದ ಬೋರಮ್ಮ ಇದಕ್ಕೆ ಪ್ರತಿಭಟಿಸಿ ಚೆನ್ನೇಗೌಡನನ್ನು ನಿಂದಿಸಿ ಮಾತನಾಡಿದಳೆಂದು ಹೇಳಲಾಗಿದ್ದು ಇದರಿಂದ ಚೆನ್ನೇಗೌಡ ಕೋಪಗೊಂಡು ಸೇಡು ತೀರಿಸುವುದಾಗಿ ತೀರ್ಮಾನಿಸಿದನೆನ್ನಲಾಗಿದೆ.

### ವಿವರ

ಹರಿಜನ ಯುವತಿಯೊಬ್ಬಳು ತನ್ನನ್ನು ನಿಂದಿಸಿ ಮಾತನಾಡಿದ್ದರಿಂದ ಕುಪಿತಗೊಂಡ ಚೆನ್ನೇ

[6ನೇ ಪುಟ ನೋಡಿ]

# 'ಈ ಕೆಟ್ಟ ಸಮಾಜದಲ್ಲಿ ರಕ್ತ ಕ್ರಾಂತಿ ಆಗಲಿ'

## ವಿಚಾರವೇದಿಕೆ : ಪ್ರಶ್ನೆಗಳು

**1. ಬಿಹಾರದ ಪರಿಸ್ಥಿತಿಯು ತೀವ್ರತೆಗೂ ಕರ್ನಾಟಕದಲ್ಲಿನ ಪರಿಸ್ಥಿತಿಗೂ ವ್ಯತ್ಯಾಸ ಏದೆಯೇ ?**

**2. ಕರ್ನಾಟಕದ ಹಳ್ಳಿಯ ಅನಕ್ಷರಸ್ಥ ದಲಿತನಿಗೆ ತನ್ನ ವರ್ಗಶತ್ರು ಯಾರೆಂಬುದರ ಬಗ್ಗೆ ತಿಳುವಳಿಕೆ ಇದೆಯೆ?**

**3. ಸರ್ಕಾರವೇ ಶಸ್ತ್ರಾಸ್ತ್ರ ನೀಡುವುದಾದರೆ ದಲಿತರ ಕೈಯಲ್ಲಿ ಬಂದೂಕವಿದ್ದರೂ ಅದರ ಕುದುರೆ (ಟ್ರಿಗರ್)ಯಲ್ಲಿ ಆಳುವ ವರ್ಗದ ಬೆರಳಿರುವುದಿಲ್ಲವೆ?**

**4. ದಲಿತರಿಗೆ ಶಸ್ತ್ರಾಸ್ತ್ರ ನೀಡಿದರೆ ಅವರ ಬದುಕು ಮತ್ತು ಸಮಾಜದ ಬದಲಾವಣೆ ಮೇಲೆ ಉಂಟಾಗಬಹುದಾದ ಪರಿಣಾಮ ಏನು ?**

**5. ದಲಿತರಿಗೆ ಶಸ್ತ್ರಾಸ್ತ್ರ ನೀಡಿದರೆ ಬಹಿರಂಗ ಹಿಂಸಾಚಾರಕ್ಕೆ ಆಹ್ವಾನ ನೀಡಿದಂತಾಗುತ್ತದೆ ಎಂಬ ಇಂದಿರಾಗಾಂಧಿ ಹೇಳಿಕೆ ಮತ್ತು ಭೂಮಾಲೀಕರಿಗೆ ಕೊಟ್ಟಿರುವ ಬಂದೂಕಗಳನ್ನು ಹಿಂತೆಗೆದುಕೊಳ್ಳಬೇಕು, ಎಂಬ ಜಗಜೀವನರಾಂ ಅವರ ಹೇಳಿಕೆಗೆ ನಿಮ್ಮ ಅಭಿಪ್ರಾಯ ಏನು ?**

---

1. ಬಿಹಾರ ಮತ್ತು ಕರ್ನಾಟಕದ ಪರಿಸ್ಥಿತಿ ಏಕೆ, ಇಡೀ ಭಾರತದ ಮೂಲೆ ಮೂಲೆಯಲ್ಲಿರುವ ದಲಿತರ ಪರಿಸ್ಥಿತಿ ತೀವ್ರತೆಗೆ ವ್ಯತ್ಯಾಸವೇ ಇಲ್ಲ.

2. ಕರ್ನಾಟಕದ ಹಳ್ಳಿಯ ಅನಕ್ಷರಸ್ಥ ದಲಿತನಿಗೆ ತನ್ನ ವರ್ಗಶತ್ರು ಯಾರೆಂಬುದು ತಿಳಿಯದೆ ಬಾರಿ ಬಾರಿಗೂ ತನ್ನ ಮೈಯನ್ನು ಸವರ್ಣೀಯರ ದೌರ್ಜನ್ಯವೆಂಬ ಗಾಳಕ್ಕೆ ಕೊಟ್ಟು ಹಿಂಡಿಹಿಪ್ಪೆಯಾಗುತ್ತಿದ್ದಾನೆ. ಈ ಬಗ್ಗೆ ಆತನಿಗೆ ತಿಳುವಳಿಕೆ ಕೊಡಲು ಯಾರೂ ಮುಂದೆ ಬರುತ್ತಿಲ್ಲ.

3. ದಲಿತನಿಗೆ ಬಂದೂಕ ಕೊಡುವುದಾದರೆ ಅದರ ಟ್ರಿಗರ್ ಮೇಲೆ ದಲಿತನ ಬೆರಳೇ ಇರುವಂತೆ ಹೋರಾಡುವುದು ದಲಿತ ನಾಯಕರೆನಿಸಿಕೊಂಡವರ ಕರ್ತವ್ಯವಲ್ಲವೆ?

4. ಪರಿಣಾಮ ಖಂಡಿತವಾಗಿ 'ಏನೂ ಆಗುವುದಿಲ್ಲ'. ದಿನ ದಿನಕ್ಕೂ ದೌರ್ಜನ್ಯವನ್ನು ನೋಡಿದಾಗ ಕೆಲವೇ ವರ್ಷಗಳಲ್ಲಿ ದಲಿತರ ನಿರ್ನಾಮವಾಗುವುದು ಖಂಡಿತ. ಆದ್ದರಿಂದ 'ಈ ಕೆಟ್ಟ ಸಮಾಜದಲ್ಲಿ ರಕ್ತ ಕ್ರಾಂತಿ ಆಗಲಿ'.

5. ಇದುವರೆಗೆ ಹರಿಜನರಿಗಾಗಿ ಹೋರಾಡಿದ ಡಾ॥ ಅಂಬೇಡ್ಕರ್ ಅವರನ್ನು ಬಿಟ್ಟರೆ ಮತ್ತಾವ ರಾಜಕಾರಣಿಯಾಗಲಿ, ರಾಜಕೀಯಪಕ್ಷವಾಗಲಿ ಏನನ್ನೂ ಮಾಡಿಲ್ಲ. ಆದ್ದರಿಂದ ಈ ಇಬ್ಬರು ಕಾರಣಿಗಳ ಹೇಳಿಕೆ ಅನರ್ಥ.

**—ಹೆಚ್. ಎಸ್. ರಾಜೇಂದ್ರಸಿಂಗ್**
ಹೆಗ್ಗಡದೇವನಕೋಟೆ.

## ದಲಿತರಿಗೆ ಬದೂಕ ಕೊಡುವುದಿಲ್ಲ

1. ಬಿಹಾರ ಹರಿಜನ ಗಿರಿಜನರಿಂದ ಹಬ್ಬಿಕೊಂಡಿರುವ ರಾಜ್ಯ. ಮೇಲ್ಜಾತಿಯವರಿಂದ ಕೂಡಿದ ರಾಜ್ಯ ಕರ್ನಾಟಕ. ಬಿಹಾರ ಈಗಾಗಲೆ ದಟ್ಟ ರಾಜಕೀಯ ಅನುಭವ ಹೊಂದಿದೆ. ಕರ್ನಾಟಕ ಯಾವ ಸ್ಪಷ್ಟವಾದ ರಾಜಕೀಯ ಚಳವಳಿಯ ಹಿನ್ನೆಲೆ ಹೊಂದಿಲ್ಲ. ದಲಿತ ವರ್ಗದಿಂದಲೇ ಒಬ್ಬ ಮುಖ್ಯಮಂತ್ರಿ ಬಂದರೂ ದಲಿತ ಸಮಸ್ಯೆಯನ್ನು ನಿವಾರಿಸಲು ಕರ್ನಾಟಕದ ದೇವರಾಜ ಅರಸುರವರಷ್ಟೇ ಇಂದಿನ ಬಿಹಾರ ಸರ್ಕಾರ ಸೋತಿದೆ.

2. ಅನಕ್ಷರಸ್ಥ ದಲಿತನಿಗೆ ವರ್ಗ ಪ್ರಜ್ಞೆ ಇದೆಯೋ ಇಲ್ಲವೋ ಅನ್ನುವುದನ್ನು ನಾವು ನಿಶ್ಚಯಿಸುವುದು ಸರಿಯಾದ ಮಾರ್ಗ ಅಲ್ಲ. ನನ್ನ ಪ್ರಕಾರ ದಲಿತನ ವಸ್ತು ಪರಿಸ್ಥಿತಿಯೇ ಅದನ್ನು ನಿರ್ಧರಿಸುತ್ತದೆ.

3. ಮೊದಲನೆಯದಾಗಿ ಎಲ್ಲ ದಲಿತರಿಗೂ ಯಾವುದೇ ಸರ್ಕಾರ ಸಧ್ಯದಲ್ಲಿ ಬಂದೂಕಗಳನ್ನು ಕೊಡುವ ಕೆಲಸ ಮಾಡುವುದಿಲ್ಲ. ಒಂದು ಸಮಯ ದಲಿತರಿಗೆ ಬಂದೂಕ ಕೊಟ್ಟು ಸರ್ಕಾರ ಕಾನೂನು ಬದ್ಧ ಕ್ರಾಂತಿ ಮಾಡಿಸುವುದೆ?

4. 'ದಲಿತರಿಗೆ ಶಸ್ತ್ರಾಸ್ತ್ರ ನೀಡಿದರೆ' ಎಂಬಂತಹ 'ರೆ'ಗಳ ಮೇಲೆ ಮನೆಕಟ್ಟುವುದು ಬೇಡ, ಸರ್ಕಾರ ನಿಜವಾಗಲೂ ಶಸ್ತ್ರಾಸ್ತ್ರ ಕೊಡಲು ಸಿದ್ಧ ವಿದೆಯೆ. ಅಂತಹ ಸಾಧ್ಯತೆಗಳ ಬಗ್ಗೆ ಯೋಚಿಸುವುದು ಒಳ್ಳೆಯದು.

5. ಇಂದಿರಾಗಾಂಧಿಯವರ ಮಾತಿಗಿಂತಲೂ ಜಗಜೀವನರಾಂ ಅವರ ಸಲಹೆ ಸಧ್ಯದಲ್ಲಿ ಅತ್ಯುತ್ತಮವಾದುದು. ಭೂಮಾಲೀಕರಿಂದ ಬಂದೂಕಗಳನ್ನು ಹಿಂತೆಗೆದುಕೊಳ್ಳುವುದು ದಲಿತರ ಮೇಲೆ ನಡೆಯುವ ದೌರ್ಜನ್ಯಗಳನ್ನು ಒಂದಿಷ್ಟು ಕಡಿಮೆ ಮಾಡಬಹುದು.

**—ಹೊರೆಯಾಲ ದೊರೆಸ್ವಾಮಿ**
ಮೈಸೂರು.

## ಬೋಜ್‌ಪುರದ ದಲಿತರಾಗಬೇಕು

1. ಬಿಹಾರದಲ್ಲಿ ಸಾಮೂಹಿಕ ಕಗ್ಗೊಲೆಗಳಿಂದ ಪರಿಸ್ಥಿತಿ ತೀವ್ರಗೊಂಡು ದಲಿತರಲ್ಲಿ ಭಯಉಂಟು ಮಾಡಿದೆ. ಕರ್ನಾಟಕದಲ್ಲೂ ದಿನನಿತ್ಯ ಎಡಬಿಡದೆ ಆಲ್ಲಲ್ಲಿ ವ್ಯಕ್ತಿಗತ ಕೊಲೆಗಳು ನಡೆಯುತ್ತಿವೆ. ಅದರಿಂದಾಗಿ ಇಡೀ ದಲಿತ ಸಮೂಹವನ್ನು ಭಯಗೊಳಿಸಿಲ್ಲ. ಸಂಖ್ಯೆಯ ಪ್ರಮಾಣದಲ್ಲಿ ಬೇರೆ ರಾಜ್ಯಗಳಷ್ಟೇ ದಲಿತರ ಕೊಲೆಗಳು ನಡೆದರೂ ಮುಸುಕಿನಲ್ಲೇ ಮುಚ್ಚಿಹೋಗುತ್ತಿವೆ.

2. ಶೋಷಣೆಯ ಮೂಲ ತಿಳಿಯದ ಕಾರಣ ತನ್ನ ವರ್ಗಶತ್ರು ಸ್ಪಷ್ಟವಾಗಿ ಗೊತ್ತಿಲ್ಲ. ಆದರೂ ನಿತ್ಯದ ಬದುಕಿನಲ್ಲಿ ಕಿರುಕುಳಕೊಡುವ ಜಮೀನ್ದಾರ ಒಕ್ಕಲಿಗ, ಲಿಂಗಾಯುತ ಎಂಬುದು ಸ್ವಲ್ಪ ಅರಿವಿದೆ. ಮತ್ತು ರಾಜಕೀಯವಾಗಿ ಇತ್ತೀಚೆಗೆ ಜನತಾಪಕ್ಷದ ಭೂ ಒಡೆಯರು.

3. ಇಂದಿನ ಬೂರ್ಜ್ವಾ ಪ್ರಜಾಪ್ರಭುತ್ವದಲ್ಲಿ ಬಂಡವಾಳಶಾಹಿಗಳು ಮತ್ತು ಭೂಮಾಲೀಕರದೇ ಸರ್ಕಾರ. ಶೋಷಕರು ಇವರೆ. ಸರ್ಕಾರವೇ ಮತ್ತೊಂದು ಕೈಗೆ ಬಂದೂಕ ನೀಡಿ ತನ್ನ ಎದೆಗೆ ಹೊಡೆಸಿಕೊಳುವುದಿಲ್ಲವಾದ್ದರಿಂದ ಅನಿವಾರ್ಯವಾಗಿ ದಲಿತರಿಗೆ ಬಂದೂಕ ನೀಡಿದರೂ ಟ್ರಿಗರ್ ಮೇಲೆ ತನ್ನ ಬೆರಳನ್ನೀಡುವುದು ಸಹಜ. ಆದ್ದರಿಂದ ಬಿಹಾರದ ಭೋಜ್‌ಪುರ ಮುಂತಾದ ಗಂಭೀರ ಸ್ಥಳಗಳಲ್ಲಿ ದಲಿತರೇ ಸ್ವತಃ ಬಂದೂಕ ನಿರ್ಮಿಸಿಕೊಳ್ಳುವಂಥ ಕೆಲಸ ಎಲ್ಲಡೆ ಆದರೆ ಹೆಚ್ಚು ಪರಿಣಾಮಕಾರಿ.

4. ಸರ್ಕಾರ ಶಸ್ತ್ರಾಸ್ತ್ರ ನೀಡುವುದು 'ಆತ್ಮ ರಕ್ಷಣೆ'ಗೆ ಎಂದು. ತನ್ನನ್ನು ಕೊಲ್ಲಲು ಬರುವವರೇ ತನ್ನ ಶತ್ರುವೇ ಆದ್ದರಿಂದ ಶೋಷಣೆ ವಿರುದ್ಧದ ಹೋರಾಟವೇ ಆಗುತ್ತದೆ. ಈ ಅನಿವಾರ್ಯ ಬಂದಾಗ ಪ್ರಜ್ಞಾಪೂರ್ವಕ ಹೋರಾಟ ಆದರೆ ತನ್ನ ವರ್ಗಶತ್ರುವಿನ ನಾಶದಿಂದಾಗಿ ಶೋಷಣೆಯ ಪಿರಮಿಡ್ಡು ಉರಳಬಹುದು. ತನ್ನ ವರ್ಗಶತ್ರುವಿನ ಬಗ್ಗೆ ಅರಿವಿಲ್ಲದಿದ್ದಲ್ಲಿ ಪರಸ್ಪರ ಘರ್ಷಣೆಗೆ ಸಲ್ಪ ಎಡೆ ಮಾಡಿಕೊಡಬಹುದು. ಈ ನಿಟ್ಟಿನಲ್ಲಿ ಪ್ರಜ್ಞಾವಂತರ ಹೊಣೆಗಾರಿಕೆ ಹೆಚ್ಚುತ್ತದೆ. ಅಷ್ಟೆ.

5. "ದಲಿತ ನಾಯಕಿ" ಇಂದಿರಾಗಾಂಧಿಯ ಹಿಪಾಕ್ರಸಿಗಿಂತ 'ದಲಿತ ನಾಯಕ' ಜಗಜೀವನರಾಂರ ಅಸಮರ್ಥತೆಯ ಪ್ರಾಮಾಣಿಕ ಮಾತು ಹೆಚ್ಚು ಅರ್ಥಪೂರ್ಣವಾದದ್ದು.

**—ಎಸ್. ಗಣೇಶನ್ ಬೆಂಗಳೂರು.**

# ದಲಿತರ ನೇಮಕಾತಿಗಳಲ್ಲಿ ಬೆಂಗಳೂರು ವಿ.ವಿ. ಅಸ್ಪೃಶ್ಯತೆ

[ಪಂಚಮ ಪ್ರತಿನಿಧಿಯಿಂದ]

ಶಿಕ್ಷಣ ನೀಡುವ ವಿಶ್ವವಿದ್ಯಾನಿಲಯಗಳೇ ಇಂದು ಅಸ್ಪೃಶ್ಯತೆ ಆಚರಿಸಲು ಹೊರಟಂತಿವೆ. ಮೂರು ದಶಕಗಳ ವಿಶೇಷ ಸವಲತ್ತುಗಳು ಮುಗಿದು ಹೋಗುತ್ತಿರುವ ಇಂದಿನ ದಿನಗಳಲ್ಲೂ ಹರಿಜನ-ಗಿರಿಜನರಿಗೆ ಮೀಸಲಾತಿ ಹೆಸರಿನಲ್ಲಿ ಮೋಸಮುಂದುವರಿದಿದೆ ಎಂಬುದಕ್ಕೆ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಕಳೆದ 13 ವರ್ಷಗಳಿಂದ ಭರ್ತಿ ಮಾಡಿರುವ ಉದ್ಯೋಗಗಳ ಸಂಖ್ಯೆ ಸ್ಪಷ್ಟಪಡಿಸಿವೆ. ಎಲ್ಲಾ ಶ್ರೇಣಿಗಳಲ್ಲೂ ಒಟ್ಟು 1534 ಹುದ್ದೆಗಳಿದ್ದು ಹರಿಜನ-ಗಿರಿಜನರ ಸಂಖ್ಯೆ ಒಟ್ಟು ಕೇವಲ 60 ಮಾತ್ರ. ಸಂವಿಧಾನ ಬದ್ಧ ಶೇ 18 ಮೀಸಲಾತಿ ಬದಲು ಈಗಿನ ಅಂಕಿಅಂಶದ ಪ್ರಕಾರ ಶೇ. 4 ಹುದ್ದೆಗಳನ್ನು ಮಾತ್ರ ನೀಡಲಾಗಿದೆ ಎಂಬುದನ್ನು ಅಧಿಕೃತ ಅಂಕಿ ಅಂಶವೊಂದು ತಿಳಿಸುತ್ತದೆ.

**ಮೊದಲ ಶ್ರೇಣಿ :** ತಲಾ ಒಂದು ಹುದ್ದೆ ಇರುವ ಉಪಕುಲಪತಿ, ರಿಜಿಸ್ಟ್ರಾರ್, ಪರೀಕ್ಷಾನಿಯಂತ್ರಣಾಧಿಕಾರಿ, ಹಣಕಾಸು ಅಧಿಕಾರಿ, ಗ್ರಂಥಪಾಲಕ ಆಡಳಿತಾಧಿಕಾರಿ ಇದ್ದು, ಹರಿಜನ-ಗಿರಿಜನರು ಒಬ್ಬರೂ ಇಲ್ಲ. 3 ಪ್ರಿನ್ಸಿಪಲ್ ಮತ್ತು 54 ರೀಡರ್ ಹುದ್ದೆಗಳಲ್ಲೂ ಹರಿಜನ-ಗಿರಿಜನರಿಲ್ಲ. 40 ಮಂದಿ ಪ್ರಾಧ್ಯಾಪಕರುಗಳಲ್ಲಿ 3 ಮಂದಿ ಹರಿಜನ-ಗಿರಿಜನರಿದ್ದಾರೆ.

ಎರಡನೆಶ್ರೇಣಿ: ಒಟ್ಟು 174 ಮಂದಿ ಲೆಕ್ಚರರ್ ಹುದ್ದೆಗಳಲ್ಲಿ ಹರಿಜನ ಗಿರಿಜನರ ಸಂಖ್ಯೆ ಕೇವಲ 4. 2 ಡೈರೆಕ್ಟರ್ಸ್, 1 ಅಸಿಸ್ಟೆಂಟ್ ಡೈರೆಕ್ಟರ್, 2 ಡೆಪ್ಯೂಟಿ ರಿಜಿಸ್ಟ್ರಾರ್, 3 ಅಸಿಸ್ಟೆಂಟ್ ರಿಜಿಸ್ಟ್ರಾರ್, 1 ಕೋ ಆರ್ಡಿನೇಟರ್, 3 ಸಹಾಯಕ ಹಣಕಾಸು ಅಧಿಕಾರಿಗಳು, 1 ಉಪಗ್ರಂಥಪಾಲಕ, 8 ಸಹಾಯಕ ಗ್ರಂಥಪಾಲಕರು, 1 ಎಸ್ಟೇಟ್ ಅಸಿಸ್ಟೆಂಟ್, 1 ಅಭಿವೃದ್ಧಿ ಅಧಿಕಾರಿ 1 ವಿಶೇಷ ಅಧಿಕಾರಿಹುದ್ದೆ ಇದ್ದು ಹರಿಜನ-ಗಿರಿಜನರು ಒಬ್ಬರೂ ಇಲ್ಲ. ಈ ವರ್ಗಕ್ಕೆ ಸೇರದ 102 ಜ್ಯೂನಿಯರ್ ಅಸಿಸ್ಟೆಂಟ್ಸ್, 71 ಸಂಶೋಧನ ಸಹಾಯಕರು. ಮತ್ತು 10 ಮಂದಿ ಲೈಬ್ರರಿ ಅಸಿಸ್ಟೆಂಟ್‌ನ ಹುದ್ದೆಗಳಲ್ಲಿ ಕ್ರಮವಾಗಿ 2, 4 ಮತ್ತು ಒಬ್ಬ ಹರಿಜನ-ಗಿರಿಜನರಿದ್ದಾರೆ.

ಕಚೇರಿ ಸಿಬ್ಬಂದಿ: 30 ಮಂದಿ ಕಚೇರಿ ಸೂಪರಿಂಟೆಂಡೆಂಟ್‌ಗಳಲ್ಲಿ ಹರಿಜನರೊಬ್ಬರಿದ್ದಾರೆ. 3 ಆಪ್ತ ಕಾರ್ಯದರ್ಶಿಗಳು 1 ಸಾರಿಗೆ ಸೂಪರ್‌ವೈಸರ್,

1 ಅಸಿಸ್ಟೆಂಟ್, 1 ಕ್ಯಾಟಲಾಗರ್, 10 ಶೀಘ್ರಲಿಪಿಗಾರರು, 23 ಗುಮಾಸ್ತೆ-ಬೆರಳಚ್ಚುಗಾರರು, 28 ಬೆರಳಚ್ಚುಗಾರರು, 10 ಲ್ಯಾಬೊರೇಟರಿ ಅಸಿಸ್ಟೆಂಟ್, 36 ಇನ್‌ಸ್ಟ್ರಕ್ಟರ್ಸ್, 5ಟ್ರೇಸರ್ 1 ಡ್ರಾಫ್ಟ್ಸ್‌ಮನ್, 3 ಸ್ಟೋರ್ ಕೀಪರ್,

2 ಮೆಕಾನಿಕಲ್ ಆಪರೇಟರ್ಸ್ ಹುದ್ದೆಗಳಲ್ಲಿ ಹರಿಜನ-ಗಿರಿಜನರು ಒಬ್ಬರೂ ಇಲ್ಲ. 59 ಮೆಕಾನಿಕ್ಸ್‌ಗೆ ಇಬ್ಬರು, 36 ಕಂಪ್ಯೂಟರ್ಸ್, ಪ್ರಿಂಟರ್ಸ್‌ಮತ್ತು ಬೈಂಡರುಗಳಲ್ಲಿ ಮೂವರು, 9 ಕಂಡಕ್ಟರುಗಳಲ್ಲಿ ಒಬ್ಬ ಹರಿಜನ ಗಿರಿಜನರಿದ್ದಾರೆ. 15 ಮಂದಿ ಚಾಲಕರಲ್ಲಿ ಹರಿಜನ-ಗಿರಿಜನರು ಒಬ್ಬರೂ ಇಲ್ಲ. 250 ಮಂದಿ ದಿನಗೂಲಿಗಳಲ್ಲಿ 25 ಮಂದಿ ಹರಿಜನ-ಗಿರಿಜನರಿದ್ದಾರೆ.

**ವಿಶೇಷ**

ವಿಶೇಷವೆಂದರೆ 393 ಮಂದಿ ಗಾರ್ಡನರ್ಸ್, ಹೆಲ್ಪರ್ಸ್, ಜವಾನರು, ಕಕ್ಕಸ್ಸು ತೊಳೆಯುವವರು ಮತ್ತು ಪಹರೆಗಾರರ ಹುದ್ದೆಗಳಲ್ಲಿ ಒಟ್ಟು 10 ಮಂದಿ ಹರಿಜನ-ಗಿರಿಜನರಿದ್ದು, ಇಂತಹ ಹುದ್ದೆಗಳಲ್ಲೂ ಶೇ. 18 ಮೀಸಲಾತಿ ಇಲ್ಲ.

ಗುಜರಾತ್ ವಿಶ್ವವಿದ್ಯಾನಿಲಯದ ಇತ್ತೀಚಿನ ಕ್ರಮದಂತೆ ಶೇ. 50 ಹುದ್ದೆಗಳಿಗೆ ಕೇವಲ ಹರಿಜನ-ಗಿರಿಜನರನ್ನೇ ತುಂಬುವ ದಿಟ್ಟತನವನ್ನು ಮಾಡದೇ ಹೋದರೂ, ಸಂವಿಧಾನಬದ್ಧ ಶೇ.18 ಹುದ್ದೆಗಳಿಗೆ ಇನ್ನಾದರೂ ದಲಿತವರ್ಗದ ಅಭ್ಯರ್ಥಿಗಳನ್ನು ತುಂಬಿ ಬೆಂಗಳೂರು ವಿಶ್ವವಿದ್ಯಾನಿಲಯ ತನ್ನ 'ಅಸ್ಪೃಶ್ಯತೆ'ಯನ್ನು ತೊಡೆದುಹಾಕಬೇಕಾಗಿದೆ.

## ದೊಡ್ಡಮಾಳವಾಡಿ ಗ್ರಾಮದ ದಲಿತರ ಬೀದಿಪಾಲು

[ವರದಿ: ಗೋಪಾಲಕೃಷ್ಣ]

ಸರ್ಕಾರದ ಎಡಬಿಡಂಗಿ ನೀತಿಗೆ ಬಲಿಯಾಗಿ ಕುಣಿಗಲ್ ತಾಲ್ಲೂಕು ದೊಡ್ಡ ಮಾಳವಾಡಿ ಗ್ರಾಮದ 25 ದಲಿತ ಕುಟುಂಬಗಳು ಈಗ ಬೀದಿಪಾಲಾಗಿವೆ. ಸರ್ಕಾರಿ ಅಧಿಕಾರಿ ಹಾಗೂ ಸ್ಥಳೀಯ ಮುಖಂಡರ ಮಾತುಕೇಳಿ ತಮ್ಮ ಮನೆಗಳನ್ನು ಕಳೆದುಕೊಂಡು ನಿರ್ಗತಿಕರಾಗಿರುವ ಈ ದಲಿತರು ಮಳೆಗಾಳಿ ಬಿಸಿಲೆನ್ನದೆ ಊರಾಚೆ ದಿಣ್ಣೆಯೊಂದರ ಮೇಲೆ ಈಗ ವಾಸಿಸುತ್ತಿದ್ದಾರೆ.

1979ರಂದು ಧಲಿತರು ಗುಡಿಸಲು ಕಟ್ಟಿಕೊಂಡು ವಾಸಮಾಡುತ್ತಿದ್ದ ಸ್ಥಳಕ್ಕೆ ಕುಣಿಗಲ್ ತಾಲ್ಲೂಕು ಕ್ಷೇತ್ರಾಭಿವೃದ್ಧಿ ಅಧಿಕಾರಿ ಹಾಗೂ ಇತರೆ ಸ್ಥಳೀಯ ಮುಖಂಡರು ಒಂದು ಗುಡಿಸಲುಗಳಿರುವ ಸ್ಥಳದಲ್ಲಿ ಹೊಸ ಮನೆಗಳನ್ನು ಕಟ್ಟಿಸಿಕೊಡುವುದಾಗಿ ಹೇಳಿ ದಲಿತರನ್ನು ಊರಾಚೆ ಕಳುಹಿಸಿದರು.

ಹೊಸ ಮನೆ ಆಸೆಯಿಂದ ದಲಿತರೆಲ್ಲ ಸಂತೋಷದಿಂದಲೇ ಈ ಕೆಲಸ ಮಾಡಿದರು. ಆದರೆ ಇವರ ಆಸೆ ಬಹಳ ದಿನ ಉಳಿಯಲಿಲ್ಲ. ಗುಡಿಸಲುಗಳನ್ನು ಬಿಟ್ಟು ಒಂದು ನಾಲ್ಕುತಿಂಗಳಾದರೂ ಅಧಿಕಾರಿಗಳ ಸುಳಿವಾಗಲಿ ಮುಖಂಡರ ಸುಳಿವಾಗಲಿ ಕಾಣಲಿಲ್ಲ.

**ಶೆಟ್ಟಿಯ ಕುತಂತ್ರ**

ಸ್ವಂತ ಇದ್ದ ನೆಲೆ ಕಳೆದು ಕೊಂಡ ದಲಿತರು ಈ ಕುರಿತು ಅಧಿಕಾರಿಗಳಿಗೆ ನೀಡಿದ ದೂರಿಗೆ ಮಾಡಿಕೊಂಡ ಮೊರೆಗೆ ಯಾವ ಪ್ರತಿಫಲವೂ ದೊರೆಯಲಿಲ್ಲ.

ಈ ನಡುವೆ ಖಾಲಿಯಿದ್ದ ದಲಿತರ ಈ ಜಾಗದಲ್ಲಿ ಅದೇ ಊರಿನ ಜಮೀನ್ದಾರ ಶೆಟ್ಟಿ ಚಿಕ್ಕಣ್ಣ ಎನ್ನುವವನು ಅಕ್ರಮವಾಗಿ ಅಲ್ಲೊಂದು ಮನೆಕಟ್ಟಿದ. ತಮ್ಮ ನೆಲದಲ್ಲಿ ಬೇರೊಬ್ಬ ಅತಿಕ್ರಮ ನಡೆಸಿರುವನೆಂದು ದಲಿತರು ದೂರು ನೀಡಿದಾಗ ಪೊಲೀಸರು ಮಧ್ಯೆ ಪ್ರವೇಶಿಸಿ 'ಅವರೂ ಇರಲಿ, ನೀವೂ ಇರಿ' ಎಂದು ಪೂಸಿ ಮಾಡಿ ಹೋಗಿರುವರು. ತಮ್ಮ ಗುಡಿಸಲುಗಳನ್ನು ಕಳೆದುಕೊಂಡು ದಲಿತರು ನಿರ್ಗತಿಕರಾಗಿ ಮಳೆ, ಗಾಳಿ, ಬಿಸಿಲೆನ್ನದೆ ವಾಸಿಸುತಿರುವಾಗ ಅದೇ ಜಾಗದಲ್ಲಿ ಸವರ್ಣೀಯ ಜಮೀನ್ದಾರನೊಬ್ಬ ಮನೆಕಟ್ಟಿಕೊಂಡು ಆರಾಮವಾಗಿರುವುದನ್ನು ನೋಡಿದರೆ ಸರ್ಕಾರದ ಒಲವು ಎತ್ತ ಅನ್ನುವುದನ್ನು ಸ್ಪಷ್ಟಪಡಿಸುತ್ತದೆ.

ದಿನ ಬೆಳಗಾದರೆ ದಲಿತರ ಉದ್ಧಾರದ ಕೂಗು ಹಾಕುವ ಸರ್ಕಾರದ ಈ ಕೆಲಸ ಖಂಡನೀಯ. ಈ ಬಗ್ಗೆ ಸರ್ಕಾರ ಗಮನ ಹರಿಸಿ ಮನೆ ಕಳೆದುಕೊಂಡಿರುವ ದಲಿತರಿಗೆ ಕೂಡಲೇ ನ್ಯಾಯ ಒದಗಿಸಿಕೊಟ್ಟು ನಿವೇಶನಗಳನ್ನು ನಿರ್ಮಿಸಿಕೊಡಬೇಕಾಗಿದೆ.

# ಬಿಹಾರದ ದಲಿತರಿಗೆ ಶಸ್ತ್ರಾಸ್ತ್ರ

ಹರಿಜನರಿಗೆ ಶಸ್ತ್ರಾಸ್ತ್ರ ಒದಗಿಸುತ್ತೇವೆಂದು ಬಿಹಾರ ಸರ್ಕಾರ ಹೊರಡಿಸಿರುವ ಹೇಳಿಕೆ ದೇಶಾದ್ಯಾಂತ ಜನರ ಗಮನ ಸೆಳೆದಂತೆ ಕಾಣುತ್ತದೆ. ಶ್ರೀಮತಿ ಇಂದಿರಾಗಾಂಧಿ ಮೊದಲ್ಗೊಂಡು ಬಹಳ ಜನ ರಾಜಕಾರಣಿಗಳು ಈ ಸಲಹೆಯ ಬಗ್ಗೆ ತೀವ್ರ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದಾರೆ. ಕರ್ಪೂರಿ ಠಾಕೂರ್ ಹೊರತು ಬೇರೆ ಯಾರೂ ಈ ಸಲಹೆಯನ್ನು ಬೆಂಬಲಿಸುತ್ತಿರುವಂತೆ ಕಾಣುವುದಿಲ್ಲ.

ಹರಿಜನರ ಕೈಗೆ ಕೋವಿ ಬರುವುದೆಂದರೆ ಸ್ವಾಭಾವಿಕವಾಗಿಯೇ ಗಾಬರಿ ಹುಟ್ಟಿಸುವ ವಿಚಾರ. ಹರಿಜನರನ್ನು ಕೇವಲ ಪುನಃ ಮನುಷ್ಯರನ್ನಾಗಿಸುವ ಪ್ರಯತ್ನಕ್ಕೂ ಬಹಳ ದೊಡ್ಡ ಪ್ರಮಾಣದಲ್ಲಿ ಪ್ರತಿರೋಧ ಇರುವ ನಮ್ಮ ದೇಶದಲ್ಲಿನ ಈ ಗಾಬರಿಯ ಬಗ್ಗೆ ಆಶ್ಚರ್ಯ ಪಡಬೇಕಾದ್ದಿಲ್ಲ. ಮಾತಿನಲ್ಲಿ ಹೊಸ ಹೊಸ ಪದಗಳನ್ನು ಬಳಸುತ್ತಾ ಕೇವಲ ಕೆಲವೇ ಮಂದಿ ದೇಶವ್ಯಾಪ್ತಿಯಾದ ಒಂದು ಅಲೆ ಎಬ್ಬಿಸಿದ್ದನ್ನು ನೋಡಿದ್ದೇವೆ. ಹಳ್ಳಿಗಳಲ್ಲಿನ "ಸೈನಿಕ" ಶಕ್ತಿಯ ಸಮತೋಲನದಲ್ಲಿ ತೀವ್ರತೆಯಿಂದ ಕೂಡಿದ ಒಂದು ಯುಗವನ್ನು ಕಂಡಿದ್ದೇವೆ ಈ ಪರಿಸ್ಥಿತಿಯ ಒಂದು ಭಾಗ ಮಾತ್ರ ಮುಗಿದಿದೆ. ಆದರೆ ತುಮುಲಯುಗ ಇನ್ನೂ ಮುಂದುವರಿಯುವುದಕ್ಕೆ ಸಜ್ಜಾಗಿರುವಂತೆ ಕಾಣುತ್ತದೆ.

ಬಿಹಾರ ಹಳ್ಳಿಗಳಲ್ಲಿನ ಮೂಲಭೂತ ಆಯುಧ ಲಾಠಿ. ಆದಿವಾಸಿಗಳ ಮುಖ್ಯ ಶಸ್ತ್ರ ಬಿಲ್ಲು ಬಾಣ. ಜೊತೆಗೆ ಹಲವಾರು ಬಾರಿ ಹಾರೆ, ಕತ್ತಿ, ನೇಗಿಲ ಕುಳಗಳಿಂದ ಕೃಷಿಯ ಉಪಕರಣಗಳು "ಮಿಲಿಟರಿ" ಉದ್ದೇಶಗಳಿಗೆ ಬಳಸಲ್ಪಡುತ್ತವೆ. ಇವು ರೈತರ ಆಯುಧಗಳು. ಅನೇಕವೇಳೆ, ಜಮೀನ್ದಾರರ ಪಡೆಗಳೂ ಈ ಆಯುಧಗಳನ್ನು ಬಳಸುತ್ತವೆ. ಉತ್ತಮ ದರ್ಜೆಯ ಆಯುಧಗಳಾದ ಹಲವಾರು ಥರದ ಕೋವಿಗಳನ್ನು ಹೊಂದಿರುವ ವರ್ಗವೆಂದರೆ ಜಮೀನ್ದಾರರು ಮತ್ತು ಶ್ರೀಮಂತ ರೈತರು ಮಾತ್ರ. ಹಳ್ಳಿಗಳಿಗೆ ಕೋವಿಗಳ ಪರಿಚಯ ಮಾಡಿಕೊಟ್ಟವರು ಬ್ರಿಟಿಷ್ ವಸಾಹತುಶಾಯಿಗಳು. ಜಮೀನ್ದಾರರ ವರ್ಗವನ್ನು ಬಲಪಡಿಸುವುದು ಅವರ ಉದ್ದೇಶವಾಗಿತ್ತು. ಸ್ವಾತಂತ್ರ್ಯನಂತರ ಒಂದಾದ ಮೇಲೊಂದರಂತೆ ಬಂದ ಆಡಳಿತಗಳೂ ಸಹ ಹಳ್ಳಿಗಳಿಗೆ ಇನ್ನಷ್ಟು ಹಿಂಸೆಯನ್ನೇ ತುಂಬಿದವು. 60ರ ದಶಕದ ಮಧ್ಯಭಾಗದಿಂದಲೇ ಬೇಗಂತೂ, ಜಮೀನುದಾರರು ಮತ್ತು ಶ್ರೀಮಂತ ರೈತರ ಕೈಗೆ ಕೋವಿಗಳ ಹೊಳೆಯೇ ಹರಿದಿದೆ.

ಕೃಷಿ ಉತ್ಪಾದನೆಯನ್ನು ಬಂದೂಕ ಹೊಂದಿರುವುದರೊಂದಿಗೆ ಸಂಬಂಧಿಸಲಾಯಿತು. ಸರ್ಕಾರ ನಿಗದಿಮಾಡಿದ ಆಹಾರಧಾನ್ಯದ ಲೆವಿಯನ್ನು ಕ್ರಮವಾಗಿ ಪಾವತಿ ಮಾಡಿದ ಜಮೀನ್ದಾರರಿಗೆ ಕೋವಿಗಳನ್ನು ಲೈಸೆನ್ಸಗಳನ್ನು ಬಹುಮಾನಿಸಲಾಗುತ್ತಿತ್ತು. "ಬೆಳೆಗಳಿಗೆ ರಕ್ಷಣೆ"ಗಾಗಿ ಎಂದು ಲೈಸೆನ್ಸ್ ಕೊಡುತ್ತಿದ್ದ ಪದ್ಧತಿಯ ಜೊತೆಗೆ, ಇದೂ ಕೂಡ ಸರ್ಕಾರದ ಒಂದು ಘೋಷಿತ ನೀತಿಯಾಯಿತು. ಬೆಳೆಗಳ ರಕ್ಷಣೆಗಾಗಿ ಕೊಟ್ಟ ಲೈಸನ್ಸುಗಳ ಪ್ರಕಾರ ಲೈಸೆನ್ಸದಾರರು ಬೆಳೆಗಳನ್ನು ಹಾಳು ಮಾಡಲು ಬರುವ ಕಾಡು ಪ್ರಾಣಿಗಳನ್ನು ಮಾತ್ರ ಕೊಲ್ಲಬೇಕಾಗಿತ್ತು. ಆದರೆ ಹರಿಜನರೂ ಕೂಡ ಕಾಡುಪ್ರಾಣಿಗಳ ಪಟ್ಟಿಯಲ್ಲಿ ಬಂದದ್ದು ದುರಾದೃಷ್ಟಕರ.

**ಸಬ್‌ಡಿವಿಜನಲ್ ಅಧಿಕಾರಿ ಕ್ರಮ**

ಕ್ರೂರಿಗಳಾದ ಜಮೀನ್ದಾರರು "ನಿಶಸ್ತ್ರ"ಗೊಳಿಸುವುದಾಗಿ (ಅವರು ಲೈಸನ್ಸುಗಳನ್ನು ರದ್ದುಗೊಳಿಸುವುದು) ಒಂದು ವರ್ಷದ ಹಿಂದೆ ಬಿಹಾರ್ ಸರ್ಕಾರ ಹೇಳಿತ್ತು. ಅದು ಸಾಧ್ಯವಾಯಿತೇನು? ಎಲ್ಲಾ ಪೋಲಿಸ್ ಸ್ಟೇಷನ್‌ಗಳಿಂದ ತರಿಸಿಕೊಂಡ ವರದಿಗಳ ಆಧಾರದ ಮೇಲೆ "ಕ್ರೂರ" ಜಮೀನ್ದಾರರ ಮೇಲೆ ಒಂದು ಪಟ್ಟಿಯನ್ನು ತಯಾರಿಸಲು ಉನ್ನತ ಅಧಿಕಾರಿಗಳ ಒಂದು ಸಮಿತಿಯನ್ನು ಸರ್ಕಾರ ರಚಿಸಿತು. 'ಕ್ರೂರಿಗಳು'ಎಂದರೆ ಮುಗ್ಧ ಜನಗಳ ಮೇಲೆ ಗುಂಡು ಹಾರಿಸಲು ಕೋವಿಗಳನ್ನು ದುರುಪಯೋಗಪಡಿಸಿದವರು ಎಂದಾಗಿತ್ತು. ಆದರೆ ಸಮಿತಿ ರಚಿಸಿದ್ದಾಗ ಘೋಷಿಸಿದ ನಂತರ ಈ ಬಗ್ಗೆ ಮತ್ತೆ ಏನೂ ಸುದ್ದಿ ಬಂದಿಲ್ಲ. 1977ರಲ್ಲಿ ಹರಿಜನ ಪರನಾದ ವಾನುಪುರದ ಉತ್ಸಾಹಿ ಸಬ್ ಡಿವಿಜನಲ್ ಆಫೀಸರ್ ಸುಮಾರು 75 ಜಮೀನ್ದಾರರ ಕೋವಿ ಲೈಸನ್ಸುಗಳನ್ನು ರದ್ದುಗೊಳಿಸಿದ. ಅವರ ಪೈಕಿ, ಸಾಲ ರದ್ದತಿ ಮತ್ತು ಹೆಚ್ಚಿನ ವೇತನ ಕೇಳಿದ್ದಕ್ಕಾಗಿ ಗೋಪಾಲಪುರದಲ್ಲಿ ಜೀತಗಾರರನ್ನು ಪದೇ ಪದೇ ದಮನ ಮಾಡಿದ ಜಮೀನ್ದಾರರೂ ಇದ್ದರು. ಸ್ವಾತಂತ್ರ್ಯನಂತರ ಬಿಹಾರದಲ್ಲಿ ಭೂ ಸಂಬಂಧ

ವಾದ ವಿವಾದಗಳಿದ್ದ ಒಂದು
ಶದಿಂದ ಕೋವಿ ಮತ್ತು ಲೈ
ಳನ್ನು ವಶಪಡಿಸಿಕೊಂಡದ್ದು
ಮೊದಲ ಸಲವಾಗಿತ್ತು. ಆಳ
ಇದರಿಂದ ಗಾಬರಿಗೊಂಡರು.
ಆ. ನನ್ನು ಬೇರೆ ಜಾಗಕ್ಕೆ ಎತ್ತಿ
ದರು. ಹೀಗೆ ಜಮೀನ್ದಾರರನ್ನು
ಸ್ತ್ರಗೊಳಿಸಲಾಗದ ಒಂದು ಸ
ಹರಿಜನರಿಗೆ ಆಯುಧ ಕೆ
ಮಾತಾಡಿದಾಗ, ಅದರ ರಾಜ
ಶಕ್ತಿ ಮತ್ತು ನಿಷ್ಠೆಗಳ ಬಗ್ಗೆ
ಬಾಗಿಯೂ ಅನುಮಾನ ಮೂಡು

ಈ ಯೋಜನೆಯ ಬಗ್ಗೆ ಕ
ಠಾಕೂರ್ ಹಲವಾರು ತಿಂ
ಮಾತಾಡುತ್ತಿದ್ದಾರೆ. ಹರಿಜ
ಮೇಲೆ ಪದೇ ಪದೇ ನಡೆಯು
ಭೂ ಸ್ವಾಮೀ ಹಿಂಸೆಯಿಂದ ಪ್ರ
ದಿತವಾಗಿರುವಂತೆ ಇದು ಮೇ
ಟಕ್ಕೆ ಕಾಣುತ್ತದೆ ಆದರೆ ವಾ
ವಾಗಿ ಹರಿಜನರ ಮತ್ತು ಅವರ
ಸರ ಜೀವ, ಸ್ವಾತಂತ್ರ್ಯ ಮತ್ತು
ವಗಳ ರಕ್ಷಣೆ ಮಾಡುವಲ್ಲಿ

'ಬೀದಿಯಲ್ಲಿ ರಕ್ತ ಬಿದ್ದಿದೆ'

(ಕೃಪೆ: 'ಬದುಕು')



## ...ಷ್ಟು ಸತ್ಯ? ಒಂದು ವಿಶ್ಲೇಷಣೆ

...ೋಲೀಸ್ ವ್ಯವಸ್ಥೆ ತೀರ ಅಕ್ಷಮ್ಯ ...ಾಗಿ ಸೋತಿದೆ ಎಂಬುದನ್ನು ಠಾಕೂ ...ರೇ ಒಪ್ಪಿಕೊಂಡಿದ್ದಾರೆ. ಈ ...ೋಜನೆಗೆ ಇದೇ ಆಧಾರ. ಇಷ್ಟು ...ನ ಮಾತ್ರ ಅಲ್ಲ! ಇನ್ನು ಮುಂದೆ ...ೂ ಕೂಡ ಪೋಲೀಸರಿಂದ ಹರಿ ...ನರಿಗೆ ಯಾವ ಸಹಾಯವು ದೊರೆಯ ...ಾರದೆಂಬುದಕ್ಕೆ (ಈ ಯೋಜನೆಯ ...ೂೕಷಣೆಯಿಂದ) ಸೂಚನೆ ಸಿಕ್ಕಿದಂ ...ಾಗಿದೆ. ಅಂದರೆ ಇನ್ನು ಮುಂದಾ ...ರೂ, (ಜಮೀನ್ದಾರರು ಮತ್ತು ಹರಿ ...ನರೆಂಬ) ಎರಡು ವಿರೋಧಿ ಬಣಗಳ ...ಕ್ಕೆ ಒಂದೇ ಬಣದ ಕಡೆಯೇ ಎಲ್ಲಾ ...ಾವು ನೋವು ಆಗಬಾರದೆಂದಿದ್ದರೆ, ...ರಿಜನರು ಶಸ್ತ್ರಸಜ್ಜಿತರಾಗಬೇಕು ...ಾಪರೇ!

...ಿ ನಿಚ್ಚಳ ಸತ್ಯವನ್ನೇ ಜನತೆಯ ...ಮುಂದೆ ಒಪ್ಪಿಸುವ ಪ್ರಯತ್ನ ಬಹಳ ...ನಗಳಿಂದಲೂ ನಡೆಯುತ್ತಿದೆಯೆಂಬು ...ನ್ನು ಠಾಕೂರರು ಪ್ರಾಮಾಣಿಕರಾಗಿ ...ರೆ ಒಪ್ಪಬೇಕಾಗುತ್ತದೆ. ಇದನ್ನು ...ಪ್ಪಿಕೊಂಡರೆ, ರಾಜಕೀಯ ಪ್ರಜ್ಞೆ



ಯಿಂದ ಸ್ಫೂರ್ತಿ ಪಡೆದ ಹರಿಜನರು ತಾವೇ ಶಸ್ತ್ರ ಹಿಡಿದಾಗ ಅವರನ್ನು ತಮ್ಮ 'ಪೋಲೀಸರು ಕೊಂದದ್ದೇಕೆಂಬುದನ್ನು ಈ 'ಸಮಾಜವಾದಿ' ನಾಯಕ ವಿವರಿಸಬೇಕಾಗುತ್ತದೆ. ಗಾಂಧಿ ಮತ್ತು ನಕ್ಸಲೀಯ ತತ್ವಗಳ ನಡುವೆ (ಪ್ರತಿಗಾಮಿಗಳೆದುರು ನರಸತ್ತ ಅಹಿಂಸೆ ಮತ್ತು ಕ್ರಾಂತಿಕಾರಿ ಹಿಂಸೆಗಳ ನಡುವೆನಾ) ತಮ್ಮ ನೀತಿ ಎಲ್ಲಿ ನಿಲ್ಲುತ್ತದೆ ಎಂಬುದನ್ನು ಅವರು ಹೇಳಬೇಕಾಗುತ್ತದೆ. ಹಾಗೆ ಮಾಡದಿದ್ದರೆ ಅವರ ಇತರ ಅನೇಕ ಸ್ಟಂಟ್‌ಗಳಂತೆ ಇತ್ತೀಚಿನ ಈ ಘೋಷಣೆಯೂ ಕೂಡ ಒಂದು ದೊಡ್ಡ ರಾಜಕೀಯ ಸ್ಟಂಟ್ ಎಂಬುದು ಸಿದ್ಧವಾಗುತ್ತದೆ.

### ಈಗಾಗಲೇ ಸ್ಟಂಟ್ ಬಯಲು

ವಾಸ್ತವವಾಗಿ ಈ ಸ್ಟಂಟ್ ಈಗಾಗಲೇ ಬಯಲಾಗಿದೆ. ಮೊದಲು ಹರಿಜನರ ಮೇಲಿನ ಅತ್ಯಾಚಾರಗಳು ಎಲ್ಲಿ ತೀವ್ರವಾಗಿದೆಯೋ, ಅಂತಹ ಜಿಲ್ಲೆಗಳಲ್ಲಿ ಲೈಸನ್ಸ್ ಮತ್ತು ಕೋವಿಯ ಕೊಡುಗೆಗಾಗಿ ಹಿಂದುಳಿದ ಜಾತಿಗಳಿಂದ ಕೆಲವರನ್ನು ಆರಿಸಲಾಗುವುದೆಂದು ಘೋಷಿಸಲಾಗಿತ್ತು. ಜಿಲ್ಲಾ ಅಧಿಕಾರಿಗಳಿಗೆ ಇದೇ ಸೂಚನೆ ಕೊಡಲಾಗಿದ್ದು, ಅದರಂತೆ ಅವರು ಪ್ರತಿ ಜಿಲ್ಲೆಯಲ್ಲೂ ನೂರು ನೂರು ಜನರ ಪಟ್ಟಿಗಳನ್ನು ತಯಾರಿಸಿದ್ದರು. ಆಗ ಇದ್ದಕ್ಕಿದ್ದಂತೆ ಅಧಿಕಾರಿಗಳಿಗೆ ಹೊಳೆದ ವಿಚಾರ: ಹರಿಜನರಿಗೆ ಬೀಗ ಹಾಕಬಲ್ಲ ಗಟ್ಟಿ ಮನೆಗಳು ಅಥವ ಇಂಥದೇ ಭದ್ರವಾದ ವ್ಯವಸ್ಥೆ ಇಲ್ಲದ್ದರಿಂದ ಅವರು ತಮ್ಮ ಆಯುಧಗಳನ್ನು ರಕ್ಷಿಸಿಕೊಳ್ಳಲು ಸಾಧ್ಯವಿಲ್ಲ. ಅವರ ಜೋಪಡಿಗಳಿಂದ ಕೋವಿಗಳನ್ನು ಸುಲಭವಾಗಿ ಯಾರಾದರೂ ಕದಿಯಬಹುದಲ್ಲ. ಎಂಥ ವಿಚಿತ್ರ! ಹರಿಜನರು ಕೋವಿಯನ್ನು ಕಾಯಬೇಕೋ ಅಥವ ಕೋವಿ ಹರಿಜನರನ್ನು ಕಾಯಬೇಕೋ?

### ಹರಿಜನರ ರೆಜಿಮಿಂಟ್

ಅಂತೂ ಬಿಹಾರ್ ಗೃಹ ರಕ್ಷಕ ದಳದಲ್ಲಿ ಒಂದು "ಹರಿಜನ ರೆಜಿಮೆಂಟ್" ಸೃಷ್ಟಿಸುವ ನಿರ್ಧಾರ ತೆಗೆದುಕೊಳ್ಳಲಾಯಿತು. ಈ ಅರೆ ಪೋಲೀಸ್ ಪಡೆಯಲ್ಲಿ ಆಗಲೇ 10,000 ಹುದ್ದೆಗಳು ಖಾಲಿ ಇವೆ. ಅವೆಲ್ಲವನ್ನೂ ಹರಿಜನರಿಗೆ ಕೊಡುವುದು; ಹೀಗೆ ಭರ್ತಿಯಾದವರಲ್ಲಿ ಕೆಲವರನ್ನು ಆರಿಸಿ ಸಶಸ್ತ್ರ ಗೃಹ ರಕ್ಷಕ ದಳದಲ್ಲಿ ಸೇರಿಸಿಕೊಂಡು, ಹರಿಜನರ ರಕ್ಷಣೆಗಾಗಿ ಹಳ್ಳಿಗಳಲ್ಲಿ ಇರಿಸಲಾಗುವುದು–ಇಲ್ಲಿಗೆ ಯೋಜನೆ ನಿಂತು ಹೋಗುತ್ತದೆ. ಈ ಸಶಸ್ತ್ರ ಹೊಂ ಗಾರ್ಡ್‌ಗಳು ಯಾವಾಗ ಮತ್ತು ಹೇಗೆ ಕಾರ್ಯ ಪ್ರವೃತ್ತರಾಗಬೇಕೆಂದು ಸ್ಪಷ್ಟ ಪಡಿಸಿಲ್ಲ. ಬದಲಾಗಿ ಆದಿವಾಸಿಗಳನ್ನು ಗೃ. ರ. ದಳಕ್ಕೆ ಆಯ್ಕೆ ಮಾಡಿ, ಅವರಿಗೂ ಶಸ್ತ್ರ ಕೊಡಲಾಗುವುದೆಂದು ಕೆಲವು ದಿನಗಳ ನಂತರ ಹೇಳಿಕೆ ಕೊಟ್ಟು ಠಾಕೂರರು ಈ ಗೊಂದಲವನ್ನು ಇನ್ನಷ್ಟು ಹೆಚ್ಚಿಸಿದ್ದಾರೆ.

ಈ ಯೋಜನೆಯನ್ನು ಸ್ವಲ್ಪ ವಿಶ್ಲೇಷಣೆ ಮಾಡೋಣ. ಒಬ್ಬ ಸಶಸ್ತ್ರ ಹೊಂ ಗಾರ್ಡನ್ನು ಅವನ ಹಳ್ಳಿಯಲ್ಲೇ ನಿಯೋಜಿಸಿದ್ದಾರೆ ಎಂದು ಕೊಳ್ಳೋಣ. ಒಂದು ದಿನ ಭೂಸ್ವಾಮಿಗಳು ಹರಿಜನರ ಕೇರಿಯ ಮೇಲೆ ದಾಳಿ ಮಾಡಲು ಸಿದ್ಧರಾಗುತ್ತಾರೆ ಅಂತಲೂ ಇಟ್ಟುಕೊಳ್ಳೋಣ. ಆಗ ಹೊಂ ಗಾರ್ಡ ಏನು ಮಾಡುತ್ತಾನೆ" ಅವನು ತನ್ನದೇ ನಿರ್ಧಾರದಂತೆ ರೈಫಲ್ ಬಳಸಲು ಸಾಧ್ಯವಾಗುತ್ತೇನು? ಅವನೊಬ್ಬ ಸರ್ಕಾರಿ ನೌಕರನಾಗಿರುವುದರಿಂದ, ಒಬ್ಬ ಮ್ಯಾಜಿಸ್ಟ್ರೇಟರ ಅಪ್ಪಣೆಗೆ ಅನುಸಾರವಾಗಿಯೇ ನಡೆದುಕೊಳ್ಳಬೇಕಾಗುತ್ತೆ. ಇಲ್ಲದಿದ್ದರೆ ಅವನನ್ನು ಸಸ್ಪೆಂಡ್ ಮಾಡಿ, ಕ್ರಿಮಿನಲ್ ಮೊಕದ್ದಮೆ ನಡೆಸಲಾಗುತ್ತೆ. ಆದ್ದರಿಂದ ಈ ಎಲ್ಲಾ ಹೊಂ ಗಾರ್ಡಗಳೂ ಸಮಯಕ್ಕೆ ಸರಿಯಾಗಿ ಕೆಲಸ ನಿರ್ವಹಿಸಬೇಕಾದರೆ ಪ್ರತಿ ಹಳ್ಳಿಗೂ ಒಬ್ಬ ಮ್ಯಾಜಿಸ್ಟ್ರೇಟ್ ಇರಬೇಕಾಗುತ್ತೆ. ಸರ್ಕಾರ ಹತ್ತು ಸಾವಿರ ಮ್ಯಾಜಿಸ್ಟ್ರೇಟರನ್ನು ಭರ್ತಿ ಮಾಡುತ್ತೇನು? ಹಾಗಿಲ್ಲದೆ ಹೊಂ ಗಾರ್ಡಗಳು ಕಾರ್ಯ ನಿರ್ವಹಿಸಲು ಮ್ಯಾಜಿಸ್ಟ್ರೇಟ್ ಅಪ್ಪಣೆ ಬೇಡವೆನ್ನುವುದಾದರೆ ಅದೊಂದು ಹೊಸತು ಆದ ಕ್ರಮವಾಗಿದ್ದು ಅದಕ್ಕಾಗಿ ರಾಜ್ಯದ ಎಲ್ಲಾ ಕಾನೂನು ಪುಸ್ತಕಗಳು, ಕಾನೂನುಗಳು ಮತ್ತು ವಿಧಿಗಳನ್ನು ಬದಲಿಸಬೇಕಾಗುತ್ತೆ ಇದನ್ನು ಇನ್ನು ಸ್ಪಷ್ಟಪಡಿಸಿಲ್ಲ.

### ಒಬ್ಬ ಹೊಂ ಗಾರ್ಡ ಹೋರಾಡಲು ಸಾಧ್ಯವೆ?

ಒಂದು ವೇಳೆ ಹೀಗೆ ಆಯಿತೆಂದು ಕೊಂಡರೂ. ಇನ್ನೂ ಹಲವಾರು ಪ್ರಶ್ನೆಗಳು ಉತ್ತರ ಕಾಣದೇ ಉಳಿದುಕೊಳ್ಳುತ್ತವೆ. ಸಾಮಾನ್ಯವಾಗಿ ಲೆಕ್ಕವಿಲ್ಲದಷ್ಟು ಲೈಸೆನ್ಸ್‌ವುಳ್ಳ ಕೋವಿಗಳನ್ನು ನಾಡ ಕೋವಿಗಳನ್ನು ಹೊಂದಿರುವ ಜಮೀನ್ದಾರರ ವಿರುದ್ಧ ಕೇವಲ ಒಬ್ಬ ಹೊಂ ಗಾರ್ಡ ಹೋರಾಡಲು ಸಾಧ್ಯವೇ? ಹಾಗೇನಾದರು ಅವನು ಹೊರಬರುವಷ್ಟು ಧೈರ್ಯ ಮಾಡಿದ್ದಾದರೆ ಈ ಅಸಮ ಹೋರಾಟದಲ್ಲಿ ಆ ಬಡಪಾಯಿ ತನ್ನ ಪ್ರಾಣವನ್ನೇ ತೆರಬೇಕಾಗುತ್ತೆ. ಇಂಥ ಸಶಸ್ತ್ರ ಪಡೆಗಳ ಹಿಂದೆ ಉನ್ನತ ಮಟ್ಟದ ರಾಜಕೀಯ ಪ್ರಜ್ಞೆವುಳ್ಳ ಜನ ಸಮೂಹವನ್ನು ದೊಡ್ಡ ಪ್ರಮಾಣದಲ್ಲಿ ಸಂಘಟಿಸದಿದ್ದರೆ, ಭೂಸ್ವಾಮಿಗಳು ಜಯಗಳಿಸುತ್ತಲೇ ಹೋಗುತ್ತಾರೆ ಎಂಬುದನ್ನು ಅಲ್ಲಿನ ಮುಖ್ಯಮಂತ್ರಿಗಳು ಅರ್ಥ ಮಾಡಿ

(6ನೇ ಪುಟ ನೋಡಿ)

## ದಲಿತ ನುಡಿ

ನವಸಮಾಜ ನಿರ್ಮಾಣ ಪ್ರಾರ್ಥನೆ, ಘೋಷಣೆಗಳಿಂದ ಸಾಧ್ಯವಾಗದು. ಅದಕ್ಕೆ ಕ್ರಾಂತಿಯೇ ಅಗತ್ಯ. ವೈಚಾರಿಕತೆ ಇಲ್ಲದ ಶಾಸ್ತ್ರಜ್ಞಾನ ಎಷ್ಟೇ ಶ್ರೇಷ್ಠವಾದುದಾದರೂ ಅದು ಮಾನವರಿಗೆ ಮಾತ್ರ ನಿರುಪಯೋಗಿ.

—ಅಂಬೇಡ್ಕರ್

---

ನೀಗ್ರೋ ಕವನ

## ಆ ಒಂಟಿ ಜೀವ

ಒಂಟಿ ದಾರಿಯ ಬದಿಯ
ಮುದುಕಿಯೊಬ್ಬಳು ತಾನು
ತನ್‌ತನಗೆ ನುಡಿಯುತ್ತ
ಹೋಗುತಿದ್ದುದ ಕಂಡೆ.
ಹಳ್ಳಿದಾರಿಯ ಬದಿಯೆ,
ತನ್‌ತಾನೆ ನುಡಿಸುತ್ತ
ನಡೆಯುತಿದ್ದುದ ಕಂಡೆ.
ಮಗೂ, ಜನರೇಕೆ
ಏಕಾಂತದಲಿ ಮಾತನಾಡುವರೆಂದು,
ನಿನಗೆ ಗೊತ್ತಿಲ್ಲ.
ದಾರಿ ಬಲುಉದ್ದವಿರೆ,
ದಾರಿಗರು ಇಲ್ಲದಿರೆ,
ಮಾನವ ತನ್‌ತಾನೆ ಮಾತನಾಡುತ್ತಾನೆ.
ವ್ಯಥೆಯ ತುಂತುರು ಮಳೆಯ
ಬಾಣಗಳು ಸುರಿವಾಗ,
ಒಂಟಿ ದಾರಿಗನೊಬ್ಬ
ತನ್ನ ಕುರಿತೇ ತಾನು ಮಾತನಾಡಲು ಬಹುದು.
ಹಾಗೆಯೆ ಈ ಮುದುಕಿ,
ಹಳ್ಳಿ ಒಂಟಿದಾರಿಯ ಬದಿ,
ಎಲ್ಲಕಾಲದಿ ನಗುತ,
ಕಣ್ಣೀರ ಒಳಿಯಲಿಕೆ,
ಗೊಣಗುತ್ತಲಿರಬಹುದು.
ಮುದುಕಿ ನೀ ದುಃಖಿಯಾಗಿರುವೆ!
'ನನ್ನ ಪರಿಸ್ಥಿತಿಯೂ ಕೂಡ ನಿನ್ನ ಹಾಗೆಯೇ ಇಹುದು.'

ಮೂಲ : ರ್‍ಯಾಫೇಲ್ ಆರ್ಮಟ್ರ್ಯೊ
ಅನುವಾದ : ಬಿ. ಕೃಷ್ಣಪ್ಪ

## ಯುವತಿ ಕೊಲೆ

(1ನೇ ಪುಟದಿಂದ)

ಗೌಡ ತನ್ನೊಡನೆ ಇತರ ಕೆಲವರನ್ನು ಕರೆದುಕೊಂಡು ಅದೇ ರಾತ್ರಿ ಸುಮಾರು 9 ಗಂಟೆವೇಳೆಗೆ ಬೋರಮ್ಮ ಅವರ ಮನೆಗೆ ಬಂದನು.
ಮನೆಯಲ್ಲಿದ್ದ ಬೋರಮ್ಮನನ್ನು ಚನ್ನೇಗೌಡ ಮತ್ತು ಅವನ ಬೆಂಬಲಿಗರು ಆಕೆಯ ತಾಯಿಯನ್ನು ಥಳಿಸಿ ಹೊರಕ್ಕೆಳೆದು ತಂದು ಅಪಹರಿಸಿಕೊಂಡು ಹೋದರು. ಏಟು ತಾಳಲಾರದೆ ಬೋರಮ್ಮ ಗೋಳಿಡುವಾಗ ಜಮೀನ್ದಾರ ಚನ್ನೇಗೌಡ ಮತ್ತು ಅವನ ಬೆಂಬಲಿಗರು ಬೋರಮ್ಮನ ಮಾನಭಂಗ ಮಾಡಿ ಹತ್ತಿರದಲ್ಲೆ ಇದ್ದ ಬಾವಿಗೆ ಎಸೆದು ಕೊಲೆಯನ್ನು ಮುಚ್ಚಿಹಾಕಲು ಯತ್ನಿಸಿದರೆಂದು ದ. ಸಂ. ಸ ತಿಳಿಸಿದೆ.

### ಪೋಲೀಸರ ಅಸಹಕಾರ

ಸವರ್ಣೀಯ ಜಮೀನ್ದಾರರ ಹಲ್ಲೆಯಿಂದ ಹೆದರಿದ ಬೋರಮ್ಮನ ತಾಯಿ ಶ್ರೀಮತಿ ಲಕ್ಷ್ಮಮ್ಮ ಮಾ. 23 ರಂದು ಹಾಸನ ಪೊಲೀಸರಿಗೆ ದೂರು ನೀಡಿದರು. ಆದರೆ ಪೊಲೀಸರ ಈ ದೂರಿನ ಅನ್ವಯ ಯಾವ ಕ್ರಮವನ್ನು ಕೈಗೊಳ್ಳಲಿಲ್ಲ.
ಮಾರನೆದಿನ ಬೋರಮ್ಮನ ಮೃತದೇಹ ಬಾವಿಯಲ್ಲಿ ಪತ್ತೆಯಾಯಿತು. ಶವ ಪರೀಕ್ಷೆ ಮಾಡಿದ ಆರೋಗ್ಯಾಧಿಕಾರಿ ನೀರಿನಲ್ಲಿ ಮುಳುಗಿದ್ದರಿಂದ ಸಾವು ಸಂಭವಿಸಿದೆ ಎಂದು ತಿಳಿಸಿ ಆಕೆಯ ವಯಸ್ಸನ್ನು 18ರಿಂದ 14 ವರ್ಷಕ್ಕೆ ಇಳಿಸಿ ವರದಿ ಸಲ್ಲಿಸಿದರು.

ವರದಿಯನ್ನು ಆಧರಿಸಿ ಪೊಲೀಸರು ಜೀವನದಲ್ಲಿ ಜಿಗುಪ್ಸೆ ಹೊಂದಿದ ಕಾರಣ 14 ವರ್ಷ ವಯಸ್ಸಿನ ಯುವತಿ ಬೋರಮ್ಮ ಬಾವಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಂಡಿರುವಳೆಂದು ತೀರ್ಮಾನಕ್ಕೆ ಬಂದು ಪ್ರಕರಣವನ್ನು ಅಂತ್ಯಗೊಳಿಸಿದರು.

### ತನಿಖೆಗೆ ಒತ್ತಾಯ

ಪೊಲೀಸರು, ಆರೋಗ್ಯಾಧಿಕಾರಿ ಹಾಗೂ ಭೂಮಾಲೀಕರು ಸೇರಿ ಪ್ರಕರಣವನ್ನು ಮುಚ್ಚಿಹಾಕುತ್ತಿದ್ದಾರೆಂದು ತಿಳಿದ ದ. ಸಂ. ಸ. ಹಾಸನಶಾಖೆ ಮಧ್ಯಪ್ರವೇಶಿಸಿ ನಡೆಸಿದ ತನಿಖೆಯಿಂದ ಇದು ಕೊಲೆ ಪ್ರಕರಣವೆಂದು ನಿಖರವಾಗಿ ಗೊತ್ತಾಗಿದೆ. ಈ ಕೊಲೆ ಪ್ರಕರಣದ ಬಗ್ಗೆ ನ್ಯಾಯಾಂಗ ತನಿಖೆ ನಡೆಸಬೇಕು ಹಾಗೂ ದೌರ್ಜನ್ಯಕ್ಕೊಳಗಾದ ಹರಿಜನರಿಗೆ ರಕ್ಷಣೆ ನೀಡುವಲ್ಲಿ ವಿಫಲವಾದ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳಬೇಕು ಎಂದು ಅದು ಸರ್ಕಾರವನ್ನು ಒತ್ತಾಯಿಸಿದೆ.

## ದಲಿತರಿಗೆ ಶಸ್ತ್ರಾಸ್ತ್ರ

[ಮಧ್ಯದ ಪುಟದಿಂದ]

ಕೊಳ್ಳಬೇಕು. ಇಷ್ಟಾಗಿಯೂ, ಆ ಹೊಂ ಗಾರ್ಡ . ಜಮೀನ್ದಾರರ "ಏಜೆಂಟ್"ಆಗಿ ಪರಿವರ್ತನೆ ಹೊಂದುವ ಸಾಧ್ಯತೆಗಳೇ ಹೆಚ್ಚು. ಇಡೀ ಪೋಲೀಸ್ ಸ್ಟೇಷನ್‌ಗಳನ್ನೇ ಕೊಂಡುಕೊಳ್ಳುವುದು ಸಾಧ್ಯವೆಂದ ಮೇಲೆ, ಈ ಬಡಪಾಯಿ ಹರಿಜನ ಹೊಂ ಗಾರ್ಡ ಮಾತ್ರ ಪ್ರಾಮಾಣಿಕತೆಗಾಗಿಯೇ ಹುಟ್ಟಿದ್ದಾನೆಂದು ನಂಬುವುದು ಸಾಧ್ಯವೇ? ರಾಜಕೀಯ ಅಧಿಕಾರದ ಪಾಲು ಪಡೆದ ಹರಿಜನರು ಹೀಗೆ ಆಳುವ ವರ್ಗದ "ದಲ್ಲಾಳಿ"ಗಳಾಗುತ್ತಾರೆಂಬುದನ್ನು ನಾವು ಕಂಡಿದ್ದೇವೆ. ಧನಬಾದನಲ್ಲಿ ಒಬ್ಬ ಹರಿಜನ ಪೋಲೀಸ್ ಸೂಪರಿಂಟೆಂಡೆಂಟ್ ಇದ್ದ. ಹರಿಜನ ಮತ್ತು ಆದಿವಾಸಿ ಕಾರ್ಮಿಕರನ್ನು ತುಳಿದು ಶೋಷಿಸುತ್ತಿದ್ದ ಮೆಲ್ಜಾತಿಯ ಕಂಟ್ರಾಕ್ಟರಗಳು ಅವನನ್ನು ಹಾಯಾಗಿ ಗೆದ್ದುಕೊಂಡರು.

ಅಷ್ಟೇಕೆ ಸ್ವಾತಂತ್ರ್ಯ ನಂತರ ಜಗಜೀವನರಾಂರನ್ನು ರಾಜಕೀಯದಲ್ಲಿ ಎತ್ತಿಕೂರಿಸಿ ಅವರ ಕ್ಷೇತ್ರದ ಮೇಲ್ಜಾತಿಯ ಭೂ ಸ್ವಾಮಿಗಳು ಹರಿಜನರನ್ನು ಕೊಲ್ಲುವ ಮತ್ತು ಶೋಷಣೆ ಮಾಡುವ ಎಲ್ಲಾ ಸ್ವಾತಂತ್ರ್ಯವನ್ನು ಇಷ್ಟು ದಿನವೂ ಅನುಭವಿಸುತ್ತಿಲ್ಲವೆ?

ಹರಿಜನರಿಗೆ ಆಯುಧ ಕೊಡುತ್ತೇವೆನ್ನುವುದು ಒಂದು ಪೊಳ್ಳು ಘೋಷಣೆ ಹರಿಜನರು ಆದಿವಾಸಿಗಳು ಮತ್ತು ಇತರ ಹಿಂದುಳಿದ ಜಾತಿಗಳಿಂದ ಕೂಡಿದ ಬಡ ಮತ್ತು ಭೂರಹಿತ ರೈತರು ಹಾಗೂ ಭೂ ಸ್ವಾಮಿಗಳಿಗೆ ಸಂಬಂದಪಟ್ಟ ಸಮಸ್ಯೆಗಳನ್ನು ದಿಕ್ಕು ತಪ್ಪಿಸುವ ಒಂದು ಪ್ರಯತ್ನ ಅಷ್ಟೆ.

ಸೌಜನ್ಯ : ಫ್ರಾಂಟಿಯರ್

# ತಮಟೆ ಬಾರಿಸದ 'ಅಪರಾಧ'ಕ್ಕೆ ದಲಿತರ ಮೇಲೆ ಹಲ್ಲೆ

[ವರದಿ : ಎ.ಪಿ. ನರಸಿಂಹಪ್ಪ]

ಗ್ರಾಮ ದೇವತೆ ಹಬ್ಬದಲ್ಲಿ ತಮಟೆ ಬಾರಿಸಲು ನಿರಾಕರಿಸಿದ್ದಕ್ಕಾಗಿ ದೊಡ್ಡಬಳ್ಳಾಪುರ ತಾಲ್ಲೂಕು ಅಭಿವೃದ್ಧಿ ಮಂಡಲಿ ಸದಸ್ಯ ಎಲ್ಲಪ್ಪ ಮತ್ತು ಇತರೆ ಹನ್ನೊಂದು ಮಂದಿ ಗೂಂಡಾಗಳು ಏ. 7ರಂದು ಬೆಂಗಳೂರು ತಾಲ್ಲೂಕಿನ ಗೆದ್ದಲಪಾಳ್ಯದ ಹರಿಜನ ಕೇರಿಗೆ ನುಗ್ಗಿ ಹಲ್ಲೆ ನಡೆಸಿದ್ದಾರೆ.

ಈ ಹಲ್ಲೆ ಪ್ರಕರಣದಲ್ಲಿ ತಳವಾರ ಮುನಿಮಾರಪ್ಪ ಅವರು ತೀವ್ರ ಗಾಯಗೊಂಡಿದ್ದಾರೆ. ಗೂಂಡಾಗಳ ಹಲ್ಲೆಯಿಂದಾಗಿ ಅಲ್ಲಿನ ಹರಿಜನರು ಭೀತರಾಗಿದ್ದಾರೆ. ಹಲ್ಲೆಗೊಳಗಾಗಿ ತೀವ್ರ ಗಾಯಗೊಂಡಿದ್ದ ಮುನಿಮಾರಪ್ಪ ದೊಡ್ಡಬಳ್ಳಾಪುರ ಪೊಲೀಸ್ ಠಾಣೆಗೆ ಈ ಬಗ್ಗೆ ದೂರು ನೀಡಿದಾಗ ಹಲ್ಲೆ ಮಾಡಿದ ಗೂಂಡಾಗಳ ಮೇಲೆ ಕ್ರಮ ಕೈಗೊಳ್ಳದೆ ಮುನಿಮಾರಪ್ಪ ಅವರನ್ನೇ ಪೊಲೀಸರು ಠಾಣೆಯಲ್ಲಿ ಒಂದು ದಿನ ಇಟ್ಟಿದ್ದರೆಂದು ತಿಳಿದು ಬಂದಿದೆ.

### ಧರಣಿ

ಪೊಲೀಸರಿಂದ ರಕ್ಷಣೆ ದೊರೆಯದೆ ನಿರಾಶರಾದ ಮುನಿಮಾರಪ್ಪ ಮತ್ತು ಅವರ ಅಣ್ಣ ಮುನಿಯಪ್ಪ ಅವರು ತಾ. 12ರಂದು ಬೆಂಗಳೂರಿನಲ್ಲಿ ಮುಖ್ಯಮಂತ್ರಿಯವರ ಮನೆ ಮುಂದೆ ಧರಣಿ ನಡೆಸಿದರು.

# ನೀರಿನ ಮಾತಿಗಾಗಿ ದೌರ್ಜನ್ಯ

(ವರದಿ : ಹುಲ್ಲುಕೆರೆ ಮಹಾದೇವ)

ಉಗಾದಿ ಹಬ್ಬ ಪ್ರತಿಯೊಬ್ಬರಿಗೂ ಹರುಷ ತರುತ್ತದೆ ಅನ್ನುವುದುಂಟು. ಆದರೆ ಹೆಗ್ಗಡದೇವನ ಕೋಟೆ ಮರಹಳ್ಳಿ ಗ್ರಾಮದ ಚಿನ್ನಮ್ಮ ಮತ್ತು ಮುದ್ದಯ್ಯ ಎಂಬ ದಂಪತಿಗಳಿಗೆ ಅದೊಂದು ದುರ್ದಿನ. ನೀರಿನ ಮಾತಿಗಾಗಿ ಅಂದು ಈ ದಂಪತಿಗಳು ಸವರ್ಣೀಯರ ದೌರ್ಜನ್ಯಕ್ಕೆ ಬಲಿಯಾಗಬೇಕಾಯಿತು.

ಉಗಾದಿ ಹಬ್ಬದ ದಿನ ಸಂಜೆ ಚಿನ್ನಮ್ಮ ಊರಿಗೆಲ್ಲ ಇರುವ ಒಂದೇ ಸಾರ್ವಜನಿಕ ಕೊಳವೆ ಬಾವಿಯಲ್ಲಿ ನೀರು ತರಲು ಹೋದಳು. ಕೊಳವೆ ಬಾವಿಯನ್ನು ಮುಟ್ಟಿ ನೀರು ತೆಗೆದುಕೊಳ್ಳುತ್ತಿರುವುದನ್ನು ಕಂಡ ಸವರ್ಣೀಯರು ಆಕೆಯ ಮೇಲೆ ಎರಗಿದರು. ಮುಂದಲೆ ಹಿಡಿದು ಎಳೆದಾಡಿದರು. ಚಿನ್ನಮ್ಮ ನೋವಿನಿಂದ ಚೀರಾಡಿದಳು.

ಅದೇ ಸಮಯಕ್ಕೆ ಅಲ್ಲಿಗೆ ಬಂದ ಚಿನ್ನಮ್ಮನ ಗಂಡ ಮುದ್ದಯ್ಯನನ್ನು ಸವರ್ಣೀಯರು ಚೆನ್ನಾಗಿ ಥಳಿಸಿದರು. ಏಟು ಬಲವಾಗಿ ಬಿದ್ದಿದ್ದರಿಂದ ದಂಪತಿಗಳಿಬ್ಬರೂ ರಕ್ತಕಾರಿಕೊಂಡು ಪ್ರಜ್ಞೆ ತಪ್ಪಿ ನೆಲಕಚ್ಚಿದರು.

### ಒಡವೆ ಅಪಹರಣ

ಸವರ್ಣೀಯರ ಈ ದಾಳಿಯಲ್ಲಿ ಚಿನ್ನಮ್ಮನ ಓಲೆ, ಚೈನು, ಮೂಗುತಿ ಮತ್ತು ಮಾಂಗಲ್ಯಗಳು ಮಾಯವಾಗಿದ್ದವು. ಒಡವೆಗಳನ್ನು ಹಲ್ಲೆ ನಡೆಸಿದ ಸವರ್ಣೀಯರೇ ಅಪಹರಿಸಿದ್ದಾರೆಂದು ಗೊತ್ತಾಗಿದೆ. ಸವರ್ಣೀಯರ ಕೋಪ ಅಷ್ಟಕ್ಕೇ ನಿಲ್ಲಲಿಲ್ಲ. ಅಂದು ರಾತ್ರಿ ಹರಿಜನ ಕೇರಿಗೆ ಬೆಂಕಿ ಹಚ್ಚಿದರು. ದಲಿತರು ಎಚ್ಚರ ವಹಿಸಿದ್ದರಿಂದ ಹೆಚ್ಚು ಅನಾಹುತವಾಗದೆ ಪುಟ್ಟನಂಜಮ್ಮ ಎನ್ನುವವರ ಮನೆ ಸಂಪೂರ್ಣ ಸುಟ್ಟು ಹೋಯಿತು. ಮನೆಯಲ್ಲಿಟ್ಟಿದ್ದ ಹುರುಳಿ, ರಾಗಿ, ಬತ್ತ, ಪಾತ್ರೆಗಳು ಬೆಂಕಿಯಲ್ಲಿ ಭಸ್ಮವಾದವು.

# ಅಂಬೇಡ್ಕರ್ ಜನ್ಮದಿನಾಚರಣೆ

ದೇಶಾದ್ಯಂತ ಇಂದು ದಲಿತರು ತಮ್ಮ ಮಹಾನ್ ನಾಯಕ ಡಾ॥ ಬಿ. ಆರ್ ಅಂಬೇಡ್ಕರ್ ಅವರ ಸೈದ್ಧಾಂತಿಕ ನಿಲುವಿನ ಮೇಲೆ ಹೋರಾಟ ಮಾಡಬೇಕಾದ ಕಾಲವೊದಗಿದೆ. ಇಂತಹ ಹೋರಾಟಕ್ಕೆ ನೆಲೆ ರೂಪಿಸುವ ಅಂಬೇಡ್ಕರ್‌ರವರ ಜನ್ಮದಿನಾಚರಣೆ, ಸ್ಮರಣ ದಿನ ಸಮಾರಂಭಗಳು ಒಂದು ಸ್ಫೂರ್ತಿದಾಯಕ ಸಂದರ್ಭಗಳು.

ಕಳೆದ ಏಪ್ರಿಲ್ 14ರಿಂದ ರಾಜ್ಯಾದ್ಯಂತ ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಅನೇಕ ಘಟಕಗಳು ಅಂಬೇಡ್ಕರ್ ಅವರ 89ನೇ ಜನ್ಮದಿನವನ್ನು ಆಚರಿಸುತ್ತಿವೆ. ಈಗ ಬಂದ ವರದಿಯಂತೆ ಬೆಂಗಳೂರು, ಮೈಸೂರು, ಚಿಕ್ಕಮಗಳೂರು, ರಾಯಚೂರು, ಧಾರವಾಡ ಮುಂತಾದ ಕಡೆಗಳಲ್ಲಿ ಆಚರಿಸಲಾಗಿದೆ.

ದಲಿತ ಸಂಘರ್ಷ ಸಮಿತಿ ಮೈಸೂರು ಘಟಕವು ತನ್ನ ಮಿತ್ರ ಸಂಘಟನೆಗಳ ಸಮಾರಂಭದಲ್ಲಿ ಅಂಬೇಡ್ಕರ್ ಬಗೆಗಿನ ಕರಪತ್ರಗಳನ್ನು ಹಂಚಿತಲ್ಲದೆ ದಲಿತರಿರುವ ಕುಕ್ಕರಹಳ್ಳಿ, ಅಶೋಕಪುರಂ, ಗಾಂಧಿನಗರ, ಕೆಸರೆ, ಮುಂತಾದ ಬಡಾವಣೆಗಳಿಗೆ ಜಾಥಾ ಹೋಗಿ ಅಂಬೇಡ್ಕರ್ ಹೋರಾಟ-ಬದುಕು ಮತ್ತು ವಿಚಾರಗಳ ಬಗ್ಗೆ ಪ್ರತಿವಾರ ಶಿಕ್ಷಣ ನೀಡುವ ನಿರಂತರ ಕಾರ್ಯ ಆರಂಭಿಸಿದೆ.

# ದಲಿತ ಮಹಿಳೆಯರ ಬೆತ್ತಲೆ ಮೆರವಣಿಗೆ ನಿಲ್ಲಲಿ

ಕಲಬುರ್ಗಿಯಿಂದ ಸುಮಾರು 15 ಮೈಲಿ ದೂರದಲ್ಲಿ ಚಿಂಚೂರು ಎಂಬ ಗ್ರಾಮವಿದೆ. ಇಲ್ಲಿ ಸುಮಾರು ಸಾವಿರ ಮನೆಗಳಿದ್ದು ಅವುಗಳಲ್ಲಿ ಮುನ್ನೂರು ಹರಿಜನ ಕುಟುಂಬಗಳಿವೆ. ಈ ಹರಿಜನ ಕುಟುಂಬಗಳಲ್ಲಿ ಶೇಕಡ 75 ಕುಟುಂಬಗಳು ಅತೀ ಬಡವರಾಗಿದ್ದು ಅಂಗೈ ಅಗಲ ಭೂಮಿಯನ್ನು ಹೊಂದಿಲ್ಲ ಹೀಗಾಗಿ ಅವರಲ್ಲಿ ಬಹುಪಾಲು ಜನ ಬಡವರು, ನಿರ್ಗತಿಕರು ಆಗಿದ್ದಾರೆ. ಊರಿನಲ್ಲಿ ಮಹಾಪೂರ ತಾಯಿ ದೇವಿಯ ಗುಡಿಯಿದೆ. ಈ ಗುಡಿಯು ಬಹಳ ಪ್ರಸಿದ್ಧವಾಗಿದ್ದು, ಸಹಸ್ರಾರು ಭಕ್ತರನ್ನು ಆಕರ್ಷಿಸುತ್ತಿದೆ. ಆದರೆ ಮನುಷ್ಯತ್ವವಿರುವ ಯಾರ ಎದೆಯನ್ನು ನಡುಗಿಸುವಂಥ ಭಯಂಕರ ಸಂಪ್ರದಾಯವೊಂದು ದೇವರ ಹೆಸರಿನಲ್ಲಿ ಹಲವು ದಶಕಗಳಿಂದ ನಡೆಯುತ್ತ ಬಂದಿದೆ. ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಮನುಷ್ಯ ಜನಾಂಗವೊಂದನ್ನು ಇಷ್ಟೊಂದು ಕ್ರೂರವಾಗಿ ನಡೆಸಿಕೊಳ್ಳುತ್ತಿರುವದು ತೀರಾ ನಾಚಿಕೆಗೇಡು.

ಪ್ರತಿವರುಷ ಏಪ್ರಿಲ್–ಮೇ ತಿಂಗಳು ಊರಿನ ಹರಿಜನ ಕುಟುಂಬದಲ್ಲಿ ನೆಲೆಸಿರುವ ಮಹಾಪೂರ ತಾಯಿಯು, ನೂರಾರು ವಾದ್ಯ ವಿಶೇಷಗಳೊಡನೆ, ಊರ ಹೊರಗಿನ ಗುಡಿಯಲ್ಲಿ ನೆಲೆಸಲು ಹೊರಡುತ್ತಾಳೆ. ಊರ ಹೊರಗಿನ ಗುಡಿಗೆ ಹೋದಂದಿನಿಂದ ಐದು ಶುಕ್ರವಾರ ಮತ್ತು ಮಂಗಳವಾರ ಅಲ್ಲಿದ್ದು, ಮತ್ತೆ ಮರಳಿ ಸ್ವಸ್ಥಾನಕ್ಕೆ ಬರುತ್ತಾಳೆ.

ಹೀಗೆ ಮಹಾಪೂರ ತಾಯಿಯು ಗುಡಿಯಲ್ಲಿ ನೆಲಸಲು ಹೊರಟಾಗ ಭಯಂಕರ ಪದ್ಧತಿಯೊಂದನ್ನು ಜನ ಆಚರಿಸುತ್ತಾರೆ. ಮಹಾಪೂರ ತಾಯಿಗೆ ಹರಕೆಯನ್ನು ಎರಡು ರೀತಿಯಲ್ಲಿ ನಡೆಸುತ್ತಾರೆ. ಮೊದಲನೆಯದಾಗಿ ಕೆಲವು ಹರಿಜನ ಯುವತಿಯರನ್ನು ಜೋಗಿಣಿಯರನ್ನಾಗಿ ದೇವರ ಸೇವೆಗೆ ಬಿಡುವದು. ಹೀಗಾದ ಜೋಗಿಣಿಯರು ಊರಿನ ಮುಖಂಡರಿಗೆ ಹಾಸಿಗೆಯ ಸುಖ ನೀಡುತ್ತಾ, ದೇವರ ಹೆಸರಿನಲ್ಲಿ ವೇಶ್ಯಾ ವೃತ್ತಿ ಮಾಡುತ್ತಾರೆ. ಎರಡನೆಯದಾಗಿ ಉಟಗಿ ಉಡುವದು. ಅಂದರೆ ಹರಕೆ ಹೊತ್ತ ಸ್ತ್ರೀಯರು ದೇವಿ ನೆಲೆಸಿರುವ ಹರಿಜನ ಕೇರಿಯಿಂದ ಊರ ಹೊರಗಿನ ಗುಡಿಯ ಕಡೆಗೆ ಪೂರಾ ಬೆತ್ತಲೆಯಾಗಿ ಮೆರವಣಿಗೆಯಲ್ಲಿ ಸಾಗುತ್ತಾರೆ ಅದನ್ನು ನೋಡಲು ಸುತ್ತಮುತ್ತಲಿನ ಊರುಗಳಿಂದ ಸಹಸ್ರಾರು ಜನರು ನೆರೆಯುತ್ತಾರೆ.

ಉಟಗಿಯಲ್ಲಿ ಎರಡು ರೀತಿಗಳಿವೆ. 1) ಬೇವಿನ ಉಟಗಿ-ಅಂದರೆ ಸ್ತ್ರೀಯರು ತಮ್ಮ ಗುಪ್ತಾಂಗಗಳನ್ನು ಬೇವಿನ ಸೊಪ್ಪಿನಿಂದ ಮರೆ ಮಾಡಿಕೊಂಡು ಮೆರವಣಿಗೆ ಹೋಗುವದು. 2) ಗಂಧದ ಉಟಗಿ–ಅಂದರೆ ಸ್ತ್ರೀಯರು ಮೈತುಂಬ ಗಂಧವನ್ನು ಬಳಿದುಕೊಂಡು ಬೆತ್ತಲೆಯಾಗಿ ಮೆರವಣಿಗೆ ಹೋಗುತ್ತಾರೆ.

ಸಾಮಾನ್ಯವಾಗಿ ಮೆರವಣಿಗೆಗಳು ಮಧ್ಯಾಹ್ನದ ಹೊತ್ತು ಗುಂಪು ಗುಂಪಾಗಿ ಸಾಗುತ್ತವೆ. ಇಂಥಾ ಹರಕೆಯನ್ನು ಹೊರುವ ಹೆಂಗಸರು ಬಹಳವಾಗಿ ಹರಿಜನರೇ ಆಗಿರುತ್ತಾರೆ. ಅತಿ ಹೇಯವಾದ ಈ ಪದ್ಧತಿಗೆ ಬಡತನ ಕಾರಣ. ಅಜ್ಞಾನವೂ ಭಾಗಶಃ ಕಾರಣವಾಗಿದೆ. ಬೆತ್ತಲೆ ಮೆರವಣಿಗೆಗೆ ಸುತ್ತಮುತ್ತಲ ಊರಿನ ಶ್ರೀಮಂತರು, ಜಮೀನ್ದಾರರೂ ಪೂರ್ಣ ಬೆಂಬಲ ನೀಡುತ್ತಾರೆ. ತಮ್ಮ ಸ್ವಾರ್ಥಕ್ಕಾಗಿ ಹಾಗೂ ಕಾಮ ಪಿಪಾಸೆಗಾಗಿ ಇಂಥ ಪದ್ಧತಿಯನ್ನು ಜೀವಂತ ಉಳಿಸಿಕೊಂಡು ಬಂದಿದ್ದಾರೆ.

ಇಂಥ ಕ್ರೂರ ಪದ್ಧತಿಯೊಂದನ್ನ ಸಂಪೂರ್ಣವಾಗಿ ಕೊನೆಗಾಣಿಸುವ ಬಗ್ಗೆ ಜನತೆ ಗಂಭೀರವಾಗಿ ಯೋಚಿಸಬೇಕಾಗಿದೆ. ಮನುಷ್ಯತ್ವವಿರುವ ಪ್ರತಿಯೊಬ್ಬರು ಕ್ರೂರ ಪದ್ಧತಿಯ ನಿರ್ನಾಮಕ್ಕಾಗಿ ಸಕ್ರಿಯವಾಗಿ ಶ್ರಮಿಸಬೇಕಾಗಿದೆ. ಎಲ್ಲಾ ಪ್ರಗತಿಪರ ಜನತೆ, ಸಂಘ ಸಂಸ್ಥೆಗಳು ಈ ದಿಶೆಯಲ್ಲಿ ಕೆಲಸ ಮಾಡಿ ಬೆತ್ತಲೆ ಮೆರವಣಿಗೆ ನಡೆಯದಂತೆ ಮಾಡಬೇಕಾಗಿದೆ.

ಕರ್ನಾಟಕ ದಲಿತ ಸಂಘರ್ಷ ಸಮಿತಿ
ಮತ್ತು ಬಂಡಾಯ ಸಾಹಿತ್ಯ ಸಂಘಟನಾ ಸಮಿತಿ
ಕಲಬುರ್ಗಿ ಶಾಖೆ.

## ನನ್ನ ರಕ್ತ ಬೆಳಸಲಿ : ಸೋಲೊಮನ್ ಮಹಾಲಂಗು

[ಮೊದಲನೇ ಪುಟದಿಂದ]

ಸೇರಿದ. ಅಲ್ಲಿ ಶಸ್ತ್ರಾಸ್ತ್ರಗಳ ತರಬೇತಿಯನ್ನು ಪೂರ್ಣಗೊಳಿಸಿ ಮತ್ತೆ ಸ್ವದೇಶಕ್ಕೆ ಹಿಂತಿರುಗಿದ. ಅಷ್ಟರಲ್ಲಿ ಅಂದರೆ 1977ರಲ್ಲಿ ಸೋಟ್ರಲ್ ಜೋಹಾನ್ಸಬರ್ಗ್‌ನಲ್ಲಿ ಪೊಲೀಸರ ನಡುವೆ ಬೀದಿ ಕಾಳಗ ಆರಂಭವಾಯಿತು. ಈ ಸಂದರ್ಭದಲ್ಲಿ ತನ್ನ ಕಪ್ಪುಗೆರಿಲ್ಲಾಗಳಿಗೆ ಆಶ್ರಯ ನೀಡಲು ನಿರಾಕರಿಸಿದ ವೇರ್‌ಹೌಸ್‌ನ ಇಬ್ಬರು ಬಿಳಿಯ ಕಾವಲುಗಾರರನ್ನು ಮಹಾಲಂಗು ತನ್ನ ಬಂದೂಕಿನಿಂದ ಕೊಂದನೆಂದು ಆರೋಪಿಸಿ ಸೆರೆಮನೆಯಲ್ಲಿಡಲಾಯಿತು.

ಮಹಾಲಂಗು ತನ್ನ ಕಟ್ಟಕಡೆಯ ಉಸಿರು ಇರುವವರೆಗೂ ಎದೆಗುಂದದೆ ಧೈರ್ಯದಿಂದ ವಿಚಾರಣೆ ಎದುರಿಸಿದ. ಕೊನೆಗೆ "ಈ ಆರೋಪಗಳು ಸುಳ್ಳು; ನಾನು ನಿರಪರಾಧಿ" ಎಂದು ನ್ಯಾಯಾಲಯಕ್ಕೆ ಮೊರೆಯಿಟ್ಟ. ಆದರೆ ನ್ಯಾಯಾಲಯ ಗಲ್ಲುಶಿಕ್ಷೆ ವಿಧಿಸಿತು. ಮಹಾಲಂಗು ತನಗೆ ಜಾರಿಗೊಳಿಸಿದ ಮರಣದಂಡನೆಗೆ ಕ್ಷಮೆ ಕೇಳಲು ನಿರಾಕರಿಸಿದ.

ಕರಿಯರ ವಿಮೋಚನಾ ಹೋರಾಟಗಾರ ಸೋಲೊಮನ್ ಮಹಾಲಂಗುಗೆ ಜೀವದಾನ ನೀಡಬೇಕೆಂದು ಭಾರತವೂ ಸೇರಿದಂತೆ ವಿಶ್ವದ ಅನೇಕ ರಾಷ್ಟ್ರಗಳು ಆಫ್ರಿಕಾ ಸರ್ಕಾರಕ್ಕೆ ಮನವಿ ಮಾಡಿದವು. ವಿಶ್ವದ ಮಾತಿಗೆ ಬೆಲೆಕೊಡದ ವರ್ಣೀಯ ಸರ್ಕಾರ ಕಳೆದ ಏಪ್ರಿಲ್ 6ರಂದು ಸ್ಥಳೀಯ ವೇಳೆಪ್ರಕಾರ ಬೆಳಗ್ಗೆ 7 ಗಂಟೆಯಲ್ಲಿ ಪ್ರಿಟೋರಿಯಾ ಸೆಂಟ್ರಲ್ ಜೈಲಿನಲ್ಲಿ ಮಹಾಲಂಗು ಮತ್ತು ಅತನ ಇತರ ನಾಲ್ವರು ಗೆಳೆಯರನ್ನು ಗಲ್ಲಿಗೇರಿಸಿತು.

ಗಲ್ಲಿಗೇರುವ ಹಿಂದಿನ ದಿನ ಕೊನೆ ಭೇಟಿಗಾಗಿ ಬಂದು ತನ್ನ ಕಪ್ಪು ಜಗತ್ತಿನಿಂದ ಕಣ್ಮರೆಯಾಗಲಿದ್ದ ತನ್ನನ್ನು ನೋಡಿ ಕಣ್ಣೀರ ಕೋಡಿಹರಿಸಿದ ತಾಯಿಗೆ ಮಹಾಲಂಗು ಹೇಳಿದ ಕೊನೆ ಮಾತು: "ನನ್ನ ಬಗ್ಗೆ ಚಿಂತೆ ಬೇಡ, ಅಪಾರ ಅಳಲಿನಲ್ಲಿರುವ ಇತರರ ಬಗ್ಗೆ ಚಿಂತಿಸು. ನಾನು ನನ್ನ ಅಲ್ಪ ಸೇವೆಯನ್ನು ರಾಷ್ಟ್ರಕ್ಕೆ ಸಲ್ಲಿಸಿದ್ದೇನೆ. ನಿಮ್ಮನ್ನು ದೇವರು ರಕ್ಷಿಸಲಿ".

ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವದಲ್ಲಿ, ನೂತನ್ ಪ್ರಿಂಟಿಂಗ್‌ಪ್ರೆಸ್, ಬೆಂಗಳೂರು–3, ಇಲ್ಲಿ ಮುದ್ರಿಸಲ್ಪಟ್ಟು ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು.
ವಿಳಾಸ: 5–ಎ, ವಾಣಿ ವಾಣಿಜ್ಯಶಾಲಾ, ಪತ್ರಕರ್ತರ ಕಾಲೋನಿ, ಬೆಂಗಳೂರು–560 002